# ಭೂಮಿಕಾ

(ಗೀತಾಕಾವ್ಯದ ಮೂಲಕ ಸೀತಾದೇವಿ ಚರಿತ್ರೆ)

# ಭೂಮಿಕಾ

(ಗೀತಾಕಾವ್ಯದ ಮೂಲಕ ಸೀತಾದೇವಿ ಚರಿತ್ರೆ)

ರಚನೆ

**ಪ್ರೇಮಾಭಟ್**

ಪ್ರಕಾಶಕರು

**ಶ್ರೀ ಪ್ರೇಮಸಾಯಿ ಪ್ರಕಾಶನ**

"ಶ್ರೀ ಗುರುಪ್ರಸಾದ"

845, 4ನೇ ಮುಖ್ಯರಸ್ತೆ, ವಿಜಯನಗರ

ಬೆಂಗಳೂರು - 560 040

BHOOMIKA —(A narration of story of Sita Devi, through Geetha Kavya in Kannada) by Smt. Prema Bhat, 'Sri Guru Prasad', 845, 4th Main, Vijayanagar, Bangalore - 560 040; Phone: 3301822.

**Published by:** **Sri Prema Sai Prakashana**
'Sri Guru Prasad'
845, 4th Main, Vijayanagar,
Bangalore - 560 040.
Phone : 3301822






**Pages** : X + 93

**First Edition** : December 2001

**Price** : Rs. 40-00




**Cover Design:** Monappa

**DTP &**
**Printed by** : Sree Laxmi Art Printers
910/A, 3rd Main, Vijayanagar
Bangalore 560 040
Ph: 3300093

# ಶುಭಾಶಂಸನೆ

ವಾಲ್ಮೀಕಿ ಮುನಿಗಳು ಶ್ರೀಮದ್ರಾಮಾಯಣದಲ್ಲಿ ಮಾನವೀಯ ಗುಣ ಮೌಲ್ಯಗಳನ್ನು ಕಾವ್ಯಶೈಲಿಯಲ್ಲಿ ಮನೋಹರವಾಗಿ ಚಿತ್ರಿಸಿದ್ದಾರೆ. ತಂದೆ-ಮಗ, ತಾಯಿ-ಮಗ, ಅಣ್ಣ-ತಮ್ಮ, ಗಂಡ-ಹೆಂಡತಿ, ರಾಜ-ಪ್ರಜೆ, ಸ್ವಾಮಿ-ಸೇವಕ, ಸ್ನೇಹಿತರು-ಇತ್ಯಾದಿ ದ್ವಂದ್ವಗಳ ಮಧುರ ಸಂಬಂಧವು ಹೇಗಿತ್ತು, ಹೇಗಿರಬೇಕು ಎಂಬುದನ್ನು ಓದುಗರ ಮನೋಭೂಮಿಕೆಯಲ್ಲಿ ಶಾಶ್ವತವಾಗಿ ನಿಲ್ಲುವಂತೆ ವರ್ಣಿಸಿದ್ದಾರೆ. ಮಹಾಪುರುಷನಾದ ಶ್ರೀರಾಮನಿಗೆ ತಕ್ಕ ಪತ್ನಿಯಾಗಿ ತ್ಯಾಗ, ನಯ, ವಿನಯ, ತಾಳ್ಮೆ, ಕಷ್ಟಸಹಿಷ್ಣುತೆ, ಸೌಶೀಲ್ಯಾದಿ ಸದ್ಗುಣಗಳ ಮೂರ್ತಿ ಸೀತಾದೇವಿ. ವಿಶೇಷವಾಗಿ ಪಾತಿವ್ರತ್ಯದ ಪರಾಕಾಷ್ಠೆಯನ್ನು ಹೊಂದಿ ಅದರ ಅಗ್ನಿಪರೀಕ್ಷೆಯಲ್ಲಿ ಉತ್ತೀರ್ಣಳಾಗಿ ಕೀರ್ತಿಶಾಲಿನಿಯಾದ ಸತೀಶಿರೋಮಣಿ ಸೀತಾಮಾತೆ. ಈ ಮಧುರ ಕಾವ್ಯವು ಈ ರಾಷ್ಟ್ರದ ಎಲ್ಲಾ ರಾಜ್ಯಗಳಲ್ಲಿಯೂ ಸಕಲದೇಶ ಭಾಷೆಗಳಲ್ಲಿಯೂ ಕಾವ್ಯ, ನಾಟಕ, ಗೀತ ಕಾವ್ಯ, ಮಹಾಕಾವ್ಯಗಳ ರೂಪದಲ್ಲಿ ಹರಡಿ ವಿಖ್ಯಾತವಾದದ್ದು ಅಚ್ಚರಿಯಲ್ಲ.

ತಿಣಿಕಿದನು ಫಣಿರಾಯ ರಾಮಾ—

ಯಣದ ಕವಿಗಳ ಭಾರದಲಿ........ ಎಂದು ಕುಮಾರವ್ಯಾಸನು ಹಾಡಿರುವುದು ತಥ್ಯವೇ ಹೌದು. ಈಗಲಾದರೋ ಪಾಶ್ಚಾತ್ಯ ಸಂಸ್ಕೃತಿಯು ಹರಡಿ, ಜನತೆಯು ಜೀವನದ ಗುರಿಯನ್ನರಿಯದೆ, ಹಿಂದಿನದನ್ನು ಮರೆತು ಮುಂದಿನದನ್ನು ತಿಳಿಯದೆ ಇರುವಾಗ -

ತಿಣಿಕಿದನು ಫಣಿರಾಯನಗಣಿತ
ಬಣಗು ಕಥೆಗಳ ಭಾರದಲಿ ಮೇ -
ಣಣಬೆಯಂದದ ಬರೆಹ
ಬೆಳೆಗಳಿನಿಳೆಯು ಕಳವಳಿಸೆ ॥

ಶ್ರೀಮತಿ ಪ್ರೇಮಾಭಟ್ಟರು 'ಭೂಮಿಕಾ' ಎಂಬ ಗೀತಾಕಾವ್ಯವನ್ನು ರಚಿಸಿ ಕತ್ತಲೆಯಲ್ಲೊಂದು ದೀಪವನ್ನು ಬೆಳಗಿಸಿದ್ದಾರೆ. ''ಮಹಿಳೆಯರ ಹಕ್ಕು ಬಾಧ್ಯತೆ'' ಎಂಬ ಘೋಷಣೆಯನ್ನು ಕೂಗುತ್ತ ನಮ್ಮ ಮಹಿಳೆಯರು ಪ್ರಮೀಳೆಯರಂತೆ ವೀರಾವೇಶವನ್ನು ತಾಳಿ ಆಕಾಶದ ಕಡೆಗೆ ನೋಡುತ್ತ ಶರಗಳನ್ನು ತೂರುತ್ತಿರುವಾಗ ಭೂಮಿಜಾತೆಯಾದ ಸೀತೆ ಭೂಮಿಯನ್ನು ನೋಡುತ್ತಾ ಭೂಮಿಯ ಮೇಲೆ ನಡೆಯಲೋ ಅಥವಾ ಭೂಮಿಯೊಳಗಡಗಲೋ ಎಂಬ ಚಿಂತೆಯಲ್ಲಿದ್ದಾಳೆ.

ಶ್ರೀಮತಿ ಪ್ರೇಮಾಭಟ್ಟರು ಕನ್ನಡದಲ್ಲಿ ನೂರಾರು ಕಥೆಗಳನ್ನು ಮತ್ತು ಕಾದಂಬರಿ, ಕವನ, ಪ್ರಬಂಧ ಇತ್ಯಾದಿಗಳನ್ನು ಬರೆದು ಕನ್ನಡ ನಾಡಿನಲ್ಲಿ ವಿಖ್ಯಾತರಾದ ಮಹಿಳೆ. ನಮ್ಮ ಮಹಿಳೆಯರು ಭಾರತೀಯರ ಪ್ರಶಸ್ತವಾದ ಮಹಿಳಾ ಸಂಸ್ಕೃತಿಯನ್ನು ಗಣಿಸದೆ, ಪಾಶ್ಚಾತ್ಯರ ರೀತಿ ನೀತಿಗಳನ್ನು ಮೆಚ್ಚಿ ಅವುಗಳಿಗೆ ವಶರಾಗುತ್ತಿದ್ದಾರೆಂಬ ವ್ಯಥೆಯಿಂದ 'ಭೂಮಿಕಾ' ಎಂಬ ಈ ಗೀತಕಾವ್ಯವನ್ನು ರಚಿಸಿದ್ದಾರೆಂದು ಹೇಳಬಹುದಾಗಿದೆ. ಸ್ತ್ರೀಜಾತಿಗೇ ಆದರ್ಶಳಾದ ಸೀತಾಮಾತೆಯ ಸದ್ಗುಣಗಳನ್ನು ಕಣ್ಣಿಗೆ ಕಟ್ಟಿದಂತೆ ತೋರುವಲ್ಲಿ ಯಶಸ್ವಿಯಾಗಿದ್ದಾರೆ.

ಭೂಮಿಯ ಮಗಳು ಭೂಮಿಕಾ - ಎಂದು ಕವಯಿತ್ರಿಯ ಅಭಿಪ್ರಾಯವಾಗಿರುವಂತೆ ಭಾಸವಾಗುತ್ತದೆ. 'ಭೂಮಿಜಾ' ಎಂದೇ ನಾಮಕರಣ ಮಾಡಬಹುದಾಗಿತ್ತು. ಅಥವಾ ಸಹನೆಯಲ್ಲಿ ಭೂಮಿಗೆ ಸದೃಶಳು ಎಂಬ ಅರ್ಥವನ್ನಿಟ್ಟು 'ಇವಾರ್ಥೇಕನ್' ಪ್ರತ್ಯಯವೆಂದು ಹೇಳಬಹುದು.

ವಾಲ್ಮೀಕಿ ರಾಮಾಯಣದಲ್ಲಿಲ್ಲದ ಕೆಲವು ಅಂಶಗಳನ್ನು ಬೇರೆ ರಾಮಾಯಣ ಗ್ರಂಥಗಳಿಂದ ತೆಗೆದುಕೊಂಡಿರಬಹುದು.

ಶ್ರೀಮತಿ ಪ್ರೇಮಾಭಟ್ಟರ ನುರಿತ ಲೇಖನಿಯಿಂದ ಇಂತಹ ಕೃತಿಗಳು ಇನ್ನಷ್ಟು ಮೂಡಿ ಬರಲಿ, ಕವಿಯುತ್ತಿರುವ ಕತ್ತಲೆಯನ್ನು ತಡೆಯಲಿ ಎಂದು ಹಾರೈಸುತ್ತೇನೆ.

22-9-2001 — ವಿದ್ವಾನ್ ಎನ್. ರಂಗನಾಥ ಶರ್ಮ

ಬೆಂಗಳೂರು

# ಅರಿಕೆ

ರಾಮಾಯಣ ಮಹಾಭಾರತ ಎರಡೂ ನಮ್ಮ ನಾಡಿನ ಸನಾತನ ಧರ್ಮಗ್ರಂಥಗಳು. ಆ ಪವಿತ್ರ ಗ್ರಂಥಗಳ ಸತ್ ಪಾತ್ರಗಳನ್ನು ತಿರುಚಿ ಅಪಚಾರವೆಸಗಿದವರು ಇಲ್ಲದಿಲ್ಲ. ಗ್ರಂಥಗಳಿಗೆ ಅಪಚಾರವಾಗದಂತೆ ವಿವೇಚನೆಯ ತಕ್ಕಡಿಯೊಳಗಿಟ್ಟು, ಒರೆಗೆ ಹಚ್ಚಿ ವಿಶ್ಲೇಷಣೆಯ ಮೂಲಕ ಪಾತ್ರಗಳನ್ನು ವೈಭವೀಕರಿಸಿದ ಮಹಾಪುರುಷರಲ್ಲಿ ಆದಿಕವಿ ಪಂಪ ಪ್ರಥಮ ಸ್ಥಾನದಲ್ಲಿ ನಿಲ್ಲುತ್ತಾನೆ. ವಿವೇಚನಾರಹಿತನಾದ ದುರ್ಯೋಧನನಲ್ಲಿರುವ ದುರ್ಗುಣಗಳ ಜೊತೆಗೆ ಪಂಪ ಅವನಲ್ಲಿರುವ ವಿಶೇಷಣವನ್ನು ಗಮನಿಸಿದ್ದಾನೆ.

ಕುವೆಂಪುರವರು 'ರಾಮಾಯಣ ದರ್ಶನಂ'ನಲ್ಲಿ ಪಾತ್ರಗಳನ್ನು ಯುಕ್ತರೀತಿಯಲ್ಲಿ ಬಣ್ಣಿಸಿರುವುದನ್ನು ಕಾಣಬಹುದು. ಉದಾಹರಣೆಗೆ ಮಂಥರೆ, ಕೈಕೆ, ಧಾನ್ಯಮಾಲಿನಿ, ಊರ್ಮಿಳೆಯ ಪಾತ್ರಗಳನ್ನು ಕುರಿತು ಆಳವಾಗಿ ಚಿಂತನೆ ನಡೆಸಿ ಆಯಾಪಾತ್ರಗಳನ್ನು ಸಮಯೋಚಿತವಾಗಿ ಸಮರ್ಥ ರೀತಿಯಲ್ಲಿ ವಿಶ್ಲೇಷಿಸಿರುವುದನ್ನು ಕಾಣಬಹುದು. ಮೂಲಕಥೆಯ ಸ್ವಾರಸ್ಯವನ್ನು ಉಳಿಸಿಕೊಂಡು, ಕವಿಗೆ ಅಪಚಾರವಾಗದಂತೆ ಈ ಮಹನೀಯರು ನಡೆದುಕೊಂಡಿದ್ದಾರೆ.

ಹೀಗೆ ಅನೇಕರು ವಾಲ್ಮೀಕಿರಾಮಾಯಣವನ್ನು ಆಧಾರವಾಗಿಟ್ಟುಕೊಂಡು, ರಾಮಾಯಣ ಕೃತಿಯನ್ನು ಪುನರ್‌ರಚಿಸಿ ಭಾವಾಭಿವ್ಯಕ್ತಿಯಲ್ಲಿ ತಮ್ಮದೇ ಆದ ಛಾಪು ಮೂಡಿಸಿರುವುದನ್ನು ಕಾಣಬಹುದು.

ಈಹೊತ್ತು ಸಮಾಜದಲ್ಲಿ ನಾವು ಕಾಣುತ್ತಿರುವುದು ಸಂಘರ್ಷವನ್ನು; ಪ್ರೀತಿ, ವಿಶ್ವಾಸ, ಸಹನೆ, ತ್ಯಾಗ ಆದರ್ಶಗಳಿಲ್ಲದ ಬದುಕನ್ನು, ಕಳೆದು ಹೋಗಿರುವ ಅವಿಭಕ್ತ ಕುಟುಂಬಗಳನ್ನು, ಬದುಕು ಬರಡಾಗುತ್ತಸಾಗಿರುವುದನ್ನು. ಶಿಕ್ಷಣ, ಸೌಲತ್ತು, ಧನ, ಕನಕ ವಸ್ತುಗಳು ಬದುಕನ್ನು ಪರಿಪೂರ್ಣಗೊಳಿಸುವುದಿಲ್ಲ. ಇಂಥ ಪರಿಸ್ಥಿತಿಯಲ್ಲಿ ಸೀತೆಯ ಪಾತ್ರ ಮಹತ್ವದ್ದಾಗುತ್ತದೆ.

ಸೀತೆ ಶೋಷಣೆಗೊಳಗಾದವಳು, ಹೇಡಿ ಎಂದು ಇಂದಿನ ಪೀಳಿಗೆಯವರಿಂದ ಬಣ್ಣಿಸಲ್ಪಡುವ ಸೀತೆ ಹೇಡಿಯಲ್ಲ, ಶೋಷಣೆಗೆ ಒಳಗಾದವಳೂ ಅಲ್ಲ. ಧರ್ಮ ಸೂಕ್ಷ್ಮವನ್ನು ಬಲ್ಲವಳಾಗಿದ್ದ ಅವಳ ಬದುಕು ಪರಿಪೂರ್ಣ. ಧರ್ಮಿಷ್ಟನೂ, ದಿವ್ಯದೃಷ್ಟಿ ಉಳ್ಳವನೂ ಪುರುಷೋತ್ತಮನೂ ಆದ ಶ್ರೀರಾಮನ ಕೈಹಿಡಿದ ಸೀತೆ ಪ್ರಾಜ್ಞೆ, ವಿವೇಚನೆಯುಳ್ಳವಳು, ದಯೆ, ಕ್ಷಮೆ, ಸಹನೆ, ತ್ಯಾಗ ಆದರ್ಶಗಳ ಸಾಕಾರಮೂರ್ತಿ.

ಧರ್ಮಸೂಕ್ಷ್ಮವನ್ನು ಬಲ್ಲವಳಾಗಿದ್ದ ಸೀತೆ ಒಂದು ಸಂದರ್ಭದಲ್ಲಿ ಶ್ರೀರಾಮಚಂದ್ರನಿಗೆ ಹೇಳುವ ಮಾತು.

**ಅಯಂ ಧರ್ಮಃ ಸುಸೂಕ್ಷ್ಮೇಣ ವಿಧಿನಾ ಪ್ರಾಪ್ಯತೇ ಮಹಾನ್**
**ನಿವೃತ್ತೇನ ಚ ಶಕ್ಯೋಽಯಂ ವ್ಯಸನಾತ್ಕಾಮಜಾದಿಹ॥ (ಭಾ.ದ.ಅ.ಕ.ಸರ್ಗ೯)**

''ರಾಮಭದ್ರ! ನೀನು ಮಹಾಪುರುಷ. ಅಧರ್ಮವೆಂಬುದು ಅತ್ಯಂತ ಸೂಕ್ಷ್ಮವಾದ ರೀತಿಯಲ್ಲಿ ಮನುಷ್ಯನಲ್ಲಿ ಪ್ರವೇಶಿಸಿ ಬಿಡುವುದುಂಟು. ಕಾಮಜನ್ಯವಾದ ವ್ಯಸನಗಳಿಂದ ಮುಕ್ತನಾದವನಿಗೆ ಮಾತ್ರ ಅಧರ್ಮದಿಂದ ಪಾರಾಗಲು ಸಾಧ್ಯ.'' ಇಂಥ ಮಾತುಗಳನ್ನು ಸೀತೆ ಅನೇಕ ಸಂದರ್ಭದಲ್ಲಿ ಹೇಳುವುದನ್ನು ಕಾಣಬಹುದು.

ರಾವಣನು ಸೀತೆಯನ್ನು ಲಂಕಾಪಟ್ಟಣಕ್ಕೆ ಕರೆದೊಯ್ದು ಅಶೋಕವನದಲ್ಲಿ ಅವಳನ್ನು ಇಡುವ ಮೊದಲು ಅಂತಃಪುರಕ್ಕೆ ಕರೆದೊಯ್ದು ಆಮಿಷಗಳನ್ನೊಡ್ಡುತ್ತಾನೆ. ಆ ಸಂದರ್ಭದಲ್ಲಿ ಅವಳಿಗೆ ತನ್ನವರೆಂಬುವವರು ಯಾರೂ ಹತ್ತಿರದಲ್ಲಿಲ್ಲ. ರಾವಣನಾದರೋ ಅತ್ಯಂತ ಕ್ರೂರಿ, ನಿರ್ದಯಿ, ವಿಷಯಲಂಪಟ. ಇಂಥ ಒಂದು ಸನ್ನಿವೇಶವನ್ನು ಮನಸ್ಸಿನಲ್ಲಿ ಭಾವಿಸಿ ನೋಡಿದರೂ ಭೀತಿ ಉಂಟಾಗುತ್ತದೆ. ಆದರೆ ಸೀತೆ ವಿಚಲಿತಳಾಗುವುದಿಲ್ಲ. ಅವಳು ನಿರ್ಭಯವಾಗಿ ರಾವಣನ್ನು ಎದುರಿಸುತ್ತಾಳೆ. ಅವನನ್ನು ಒಂದು ಹುಲ್ಲು ಕಡ್ಡಿಗೆ ಸಮನೆಂದು ಭಾವಿಸಿ ನಡುವೆ ಒಂದು ಹುಲ್ಲು ಕಡ್ಡಿಯನ್ನು ಇಟ್ಟುಕೊಂಡು ಹೇಳುತ್ತಾಳೆ.

**ಸಾ ತಥೋಕ್ತಾ ತು ವೈದೇಹೀ ನಿರ್ಭಯಾ ಶೋಕಕರ್ಶಿತಾ**
**ತೃಣಮನ್ತರತಃ ಕೃತ್ವಾ ರಾವಣಂ ಪ್ರತ್ಯಭಾಷತ॥ (ಭಾ.ದ.ಅ.ಕ.ಸರ್ಗ ೫೬)**

'ದಶರಥನೆಂಬ ಮಹಾರಾಜನು ಧರ್ಮಕ್ಕೆ ಹೆಸರಾದ ಧೀಮಂತ ವ್ಯಕ್ತಿ, ಅವನ ಮಗನಾದ ಶ್ರೀರಾಮಚಂದ್ರನು ಸತ್ಯಸಂಧನೆಂದೇ ಖ್ಯಾತಿ ಹೊಂದಿದವನು ಅಲ್ಲದೆ ಧರ್ಮಾತ್ಮನೆಂದು ಮೂರು ಲೋಕವೂ ಹೆಸರಿಸುತ್ತಿದೆ. ದೀರ್ಘಬಾಹುವೂ, ವಿಶಾಲಾಕ್ಷನೂ ಆಗಿರುವ ಶ್ರೀರಾಮಚಂದ್ರನೆ ನನ್ನ ಪತಿಯು, ಪರದೈವವು' ಎಂದು ಹೇಳುವ ಮಾತನ್ನು ಗಮನಿಸಿದಾಗ ಸೀತೆಯನ್ನು ಹೇಡಿಯೆಂದು ಗುರುತಿಸುವುದು ಅಪಚಾರವೆಸಗಿದಂತೆ.

ಶ್ರೀರಾಮನಾದರೊ ಧರ್ಮಾತ್ಮ, ಸತ್ಯಸಂಧ. ಸೀತೆಗಾಗಿ ಪರಿತಪಿಸುವ ರಾಮ ದಿವ್ಯದೃಷ್ಟಿ ಉಳ್ಳವನು. ಸೀತೆಯನ್ನು ಅಗ್ನಿಪರೀಕ್ಷೆಗೆ ಒಡ್ಡಿದಾಗ ಅವಳನ್ನು ಅಗ್ನಿದೇವ ಪಾರುಮಾಡುತ್ತಾನೆ ಎಂಬ ಬಲವಾದ ನಂಬಿಕೆಯನ್ನು ಹೊಂದಿದ್ದಂತಹವನು.

ಸೀತೆಯಾದರೊ ಇದನ್ನು ಮೊದಲೇ ಪರಿಭಾವಿಸಿದ್ದವಳು. ಇವರಿಬ್ಬರದು ಅಖಂಡ ಪ್ರೇಮ. ಅಸಾದೃಶ್ಯವಾದ ಅನನ್ಯ ಪ್ರೇಮ.

ಈ ನನ್ನ ಕಾವ್ಯಕ್ಕೆ ತಿರುಮಲ ತಿರುಪತಿ ದೇವಸ್ಥಾನದ ಆಡಳಿತ ಮಂಡಳಿಯು ಸಹಾಯಧನವನ್ನು ನೀಡಿ ಪ್ರೋತ್ಸಾಹಿಸಿದೆ. ಈ ಕಾವ್ಯ ರಚನೆ ಮತ್ತು ಸಹಾಯಧನ ಲಭಿಸಿರುವುದನ್ನು ನೋಡಿದರೆ ಇದು ಒಂದು ದೈವಕೃಪೆಯೆಂದೇ ನನ್ನ ಭಾವನೆ. ಸಹಾಯಧನವನ್ನು ನೀಡಿ ಪ್ರೋತ್ಸಾಹಿಸಿದ ತಿರುಮಲ ತಿರುಪತಿ ದೇವಸ್ಥಾನದ ಆಡಳಿತ ಮಂಡಳಿಯವರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಯನ್ನು ಅರ್ಪಿಸುತ್ತೇನೆ.

ಈ ನನ್ನ ಕೃತಿಗೆ ಶುಭಾಶಂಸನೆ ನೀಡಿ ಆಶೀರ್ವದಿಸಿದ ಹಿರಿಯ ವಿದ್ವಾಂಸರಾದ ವಿದ್ವಾನ್ ಶ್ರೀ ಎನ್. ರಂಗನಾಥ ಶರ್ಮ ಹಾಗೂ ಸೂಕ್ತ ಸಲಹೆ ನೀಡಿದ ಹಿರಿಯ ಕವಿ ಡಾ. ಸಾ. ಶಿ. ಮರುಳಯ್ಯ ಅವರಿಗೆ ಕೃತಜ್ಞತೆಗಳು. ಸಹಕರಿಸಿದ ಪ್ರೊ. ಎಂ. ರಾಮಚಂದ್ರ, ಶಿವಕುಮಾರ್ ದಂಪತಿಗಳು, ಶ್ರೀ ಪಂಪಣ್ಣ, ಶ್ರೀ ಹೊ.ರಾ. ಸತ್ಯನಾರಾಯಣ ಅವರನ್ನು ಈ ಸಂದರ್ಭದಲ್ಲಿ ನೆನೆಯುತ್ತೇನೆ. ಇದನ್ನು ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ಲಕ್ಷ್ಮೀ ಆರ್ಟ್ ಪ್ರಿಂಟರ್ಸ್‌ನ ಮಾಲಿಕರಾದ ಶ್ರೀ ಎ. ಎಸ್. ಎಸ್. ಕುಮಾರ್ ಹಾಗೂ ಮುಖಚಿತ್ರದ ಕಲಾವಿದರಾದ ಶ್ರೀ ಮೋಸಪ್ಪ ಇವರುಗಳಿಗೆ ನನ್ನ ಧನ್ಯವಾದಗಳು. ಎಲ್ಲಾರೀತಿಯ ಸಹಕಾರನೀಡಿದ ನನ್ನ ಪತಿ ಶ್ರೀ ಎ.ಎಸ್. ಭಟ್ ಅವರಿಗೆ ನನ್ನ ವಂದನೆಗಳು.

26-11-2001 — ಪ್ರೇಮಾಭಟ್

ಬೆಂಗಳೂರು

# ಭೂಮಿಕಾ

ಜನಕರಾಜನ ಕುವರಿ ಜಾನಕೀ ದೇವಿ
ವನಜನಾಭನ ಸತಿ ಸೀತೆಯ ಕುರಿತು
ಕತೆಯ ಹೇಳುವೆ ಮನವೆ ನೀ ಕೇಳು ಮುದದಿ
ಅಂತಿಂಥ ಕತೆಯಲ್ಲವಿದು ಹಳೆ ಕತೆಯ ಹೊಸ ಜಾಡು

ಪೇಳಿಹರು ಬಹುಜನ ಮುನಿಪುಂಗವರು
ಬಲು ಪೆರ್ಮೆಯಿಂದಲಿ ಹಾಡಿಪಾಡಿ ಕೊಂಡಾಡುತಲಿ
ವಾಲ್ಮೀಕಿ ರಚಿತ ಶ್ರೀರಾಮ ಚರಿತೆಯನು
ನಲ್ಮೆಯಲಿ ಹೊಸೆದು ಬೆಸೆದು ಪಾಡಿಹರು

ಅಷ್ಟದಿಕ್ಪಾಲಕರಿಗೆ ಸಾಷ್ಟಾಂಗ ನಮಿಸಿ
ನಷ್ಟವಾಗದಿರಲಿ ಎನ್ನ ಚೈತನ್ಯವೆಂದು ಗಣಪಗೆ ಕೈಮುಗಿದು
ಇಷ್ಟದೈವವ ನೆನೆದು ಮನದಿ ಸರಸತಿಗೆ
ಅಷ್ಟದಳ ಪದ್ಮದಿ ಪೊಸಮಾಲೆ ನೇಯ್ದು ತೊಡಿಸುವೆ

ಬ್ರಹ್ಮ ಸೃಷ್ಟಿಯಲಿ ಮಾಯೆಗದ್ಭುತ ಶಕ್ತಿ
ಬಾಹ್ಯ ಬದುಕಿಗದುವೆ ಮಂತ್ರ ಪುಷ್ಪ
ಅಂಕೆ ಶಂಕೆಗಳಿಗಿಂದು ಪೂರ್ಣ ವಿರಾಮವ ನೀಡಿ
ಕೊಂಕಿನಲಿ ಕೊಂಕುವವರನತ್ತ ನೂಂಕಿ

ಯಂತ್ರಮಾನವಗೆ ಶಿರವ ಬಾಗುತ ನಾನು
ತಂತ್ರದಲಿ ರಚಿಸಿಹೆನು ಈ ಪದದ ನುಡಿಯ
ಚಿಚ್ಛಕ್ತಿ ಚೇತನವ ಚಿತ್ತದಲಿ ನೆನೆದು
ನಿತ್ಯ ನಿರ್ಮಲ ಮನದಿ ಕೊಂಡಾಡುವೆನು

ಕವಿಗುರು ಮುನಿಪುಂಗವರಿಗೆ ವಂದಿಪೆ ನಾನು
ಕಿವಿಉಳ್ಳವರು ಲಾಲಿಸಿರಿ ಈ ಪದವನೆನುತ
ಅರಸಿಕರ ಮರೆತು ನಾನಿಲ್ಲಿ ರಚಿಸಿಹೆನು
ಸರಸಿಜಾಕ್ಷನ ಸತಿ ಸೀತೆಯ ಕತೆಯ

ರಾಮಾಯಣ ಬರೆದ ವಾಲ್ಮೀಕಿ ಮಹಾಮುನಿಗೆ
ಕಾಲಗರ್ಭದಿ ಹೂತು ಹೋದೆಷ್ಟೋ ರಚಕರಿಗೆ
ಭಕ್ತಿರಸ ಭಾವದೊಲುಮೆ ಸಾರ್ದ ತುಳಸಿದಾಸರಿಗೆ
ಸಕಲ ವೇದ ಶಾಸ್ತ್ರ ವಿಭೂಷಣರಿಗೆ ಮಣಿದು ನಡೆವೆ

ಚೈತನ್ಯ ನೀಡಮ್ಮ ವರಲಕ್ಷ್ಮೀ ಸರಸ್ವತಿ
ಚಿತ್ತೈಸು ತಾಯಿ ಕಿಂಕರಳ ಬಿನ್ನಪವ ಲಾಲಿಸು
ಪಾಲಿಸಮ್ಮ ನೀಲಲೋಚನೆ ಶ್ರೀ ವಾಣಿ
ಲೋಲಾಕ್ಷಿಯರೆಲ್ಲ ಲಾಲಿಸಲಿ ಈ ಪದವ

ಗಾನ ವಿಶಾರದೆ, ಶಾರದೆ ವಾಗ್ವೈಖರಿ ನಿಪುಣೆ
ಮನದಂಗಳವ ಬೆಳಗು ಮತಿಗೆಕೊಡು ಸನ್ಮತಿಯ
ರಚಿಸಲೆನಗೆ ಮಹಾಸತಿಯ ಕತೆಯ
ರುಚಿಸಲದು ರಸಿಕಾರಸಿಕರೆಲ್ಲರಿಗು

ನಿಂದಿಸಲಿ ಕುಕವಿಗಳು ವಂದಿಸುವೆನವರಿಗೆ
ವಂದಿಸುವಗೆ ಶರಣೆಂಬೆ ಶಿರಬಾಗಿ ನಾನು
ಹಗೆಗಳಿಹರು ಹಾಲಾಹಲವ ಬಿತ್ತುವರು
ಕುಗ್ಗದಿರದಂತೆನ್ನ ಹರಸು ತಾಯಿ

ಬರೆಸಿದರು ಸಾವಿತ್ರಿ ದ್ರೌಪದಿ ತಾರೆ ಮಂಡೋದರಿಯರು
ಬರೆದೆನು ಅತಿಮಾನುಷದ ಅಮರ ಕತೆಯ
ಇರಲದು ನಿಮ್ಮ ಮನೆದೇವರ ಪೀಠದಲಿ
ಕಳೆಯಲಿ ನಮ್ಮ ನಿಮ್ಮೆಲ್ಲರ ಕೊಳೆ ಹರಿದು ಹೋಗಲಿ

ಇಳೆಯಲಿ ಸೀತೆ ಮತ್ತೆ ಹುಟ್ಟಿ ಬರಲಿ
ಬಂಧು ಭಗಿನಿಯರೆಲ್ಲ ನೆನೆದವಳ ಮನದಲ್ಲಿ
ಮಂದಿ ಮನಮೆಚ್ಚುವಂದದಿ ನಡೆದು
ಬಾಳ ಕಡಲಿನ ದೋಣಿ ಸುಖದಿ ಹಾಯಿಸಲಿ ||

## ಸೀತಾ ಸ್ವಯಂವರ

ಜನಕರಾಜನ ಮಗಳು ಜಾನಕೀ ದೇವಿ
ಜನಕನ ಸುಕೃತದ ಪುಣ್ಯ ಫಲ ಇವಳು
ತಾಳ್ಮೆಯಲಿ ಭೂದೇವಿಯೆಂತಿರ್ಪಳು
ತಿಳಿ ಮನದ ಹಾಲ್ಗಲ್ಲದ ಹಸುಳೆ ಸೀತೆ

ಭೂದೇವಿಯ ಮಗಳು ಭೂಮಿಕಾ ಇವಳು
ಭಾಮಿನಿಯು ಶ್ರೀದೇವಿ ಸಕಲಗುಣ ಸಂಪನ್ನೆ
ಜನಕನರಮನೆಯ ಭಾಗ್ಯಲಕ್ಷ್ಮಿ ಕಾರುಣ್ಯನಿಧಿ
ಆನಂದಮಯಿ ಘನ ಗಂಭೀರೆ ದೇವಿ

ಬೆಳೆದಿಹಳು ತುಂಬು ಪ್ರಾಯದ ಹುಡುಗಿ
ನಳಿನಾಕ್ಷಿ ಸಕಲ ಕಳೆಗಳ ಪೊತ್ತು ನಿಂದಿಹಳು
ಬಳುಕುತಲಿ ಜಗವನಳೆಯುತಲಿ ಪ್ರಮದೆ
ಬೆಳೆದಿಹಳು ಭುವನದ ಭಾಗ್ಯನಿಧಿ

ಬೆಳದಿಂಗಳ ಮೋಹಕ ಚೆಲುವು ಚಿನ್ಮಯಿಗೆ
ನಳಿದೋಳ ನೀಳ ಬೆರಳು ಬಿರುಗಣ್ಣ ಮುಖಕಮಲ
ಪುಳಕಗೊಳುವುದು ಮನಮನವು ಮುದದಿ
ನಳಿನಾಕ್ಷಿ ನಳನಳಿಸುತಲಿ ಬೆಳೆದು ನಿಂದಿಹಳು

ಹುಡುಕುತಿಹವು ಕಣ್ಗಳು ಹೃದಯೇಶ್ವರನ
ಹುಡುಗಾಟಿಕೆಯ ಮಾಡುವರು ಸಖಿಯರೆಲ್ಲ ಕೂಡಿ
ಒಡತಿಯ ಮನದಿಂಗಿತವನು ಅರಿತವರು ಇವರು
ಛೇಡಿಸುತ ರಮಿಸುತ ಸತಿಯ ಒಡನಾಟದಲಿಹರು

ಅಣಿಯಾಗಿರ್ದನಾಗಲೇ ಮಿಥಿಲೆಯರಸ
ಮಣಿದು ನಡೆವ ಮೈಥಿಲಿಗೆ ವಿವಾಹವ ಸಾರ್ದು
ವಜ್ರದುಕ್ಕಿನ ಮೇರು ಭಾರದ ಶಿವಧನುಸ್ಸನ್ನು
ಎತ್ತಿದವರಿಗರ್ಪಿತವು ಜಾನಕಿಯು ಎಂದನಾ ಜನಕ

ದಶದಿಕ್ಕುಗಳಿಂದ ಚಿತ್ತೈಸಿದರು ಮಿಥಿಲೆಗೆ
ಯಶದ ಪಥವನೇರುವ ಛಲವ ಹೊತ್ತು
ಅತಿರಥ ಮಹಾರಥರು ನಾನು ತಾನೆಂದು
ರತಿಯ ಬರವ ನಿರೀಕ್ಷಿಸುತ ಕುಳಿತಿರ್ದರಲ್ಲಿ

ಇದ್ದನಲ್ಲಿ ರಾವಣನು ಉಬ್ಬಿದೆದೆಯಲ್ಲಿ
ಬದ್ಧ ತಾನೆಂದು ಬೀಗುತಲಿ ದಶಕಂಠ
ಕಾವ ಈಶನ ಕೃಪೆ ಇರಲು ಜಯ ತನಗೆಂದು
ಶಿವಧನುಸ್ಸನ್ನೆತ್ತುವ ಛಲದಲಿ ಕುಳಿತಿರ್ದನಲ್ಲಿ

'ಎತ್ತದಿರಲಿ ದೇವರೆ ಇವನೆತ್ತಿದರೇನ ಮಾಡಲಿ
ಕಂತುಪಿತನ ನೆನೆದು ಸತಿ ಧ್ಯಾನದಲಿ
ಶಿವಶಿವ ಎತ್ತದಿರಲಿ ಇವನು ಧನುಸ್ಸನ್ನು'
ಎಂದೆನುತ ಜಾನಕಿ ಸಭೆಗೈತಂದಳು

ಹೊಸಮಾಲೆಯ ಪಿಡಿದು ಬಂದಳು ಸತಿ
ಹಸನಾದ ಭಾವದಲಿ ಪ್ರಮದೆ ನಸುನಗುತ
'ಎತ್ತನವನೆಂದಿಗೂ ನೆತ್ತಿಮೇಲಿನ ಸೂರ್ಯನಿರಲು
ಎತ್ತುವನು ಶ್ರೀರಾಮ, ಎನ್ನ ಹೃದಯದ ರಾಮ'

'ಎತ್ತುವನು ಮೊತ್ತದೊಳಗುತ್ತಮನು ಶ್ರೀರಾಮಚಂದ್ರ
ಎತ್ತುವನು ಪನ್ನಗಶಯನ ಹೃದಯೇಶ್ವರ
ಎತ್ತುವನು ಸರ್ವೋತ್ತಮನು' ಎಂದೆನುತ
ಸತಿ ಧ್ಯಾನಿಸುತ ಪುರುಷೋತ್ತಮನ ನೆನೆದು ನಿಂದಿಹಳು

ಕೋಟಿ ಸೂರ್ಯ ಪ್ರಭೆಗವನು ಸರಿಸಾಟಿ
ಸಾಟಿ ಯಾರಿಹರಿಲ್ಲಿ ಅವನಿದಿರು ಗೆಲ್ಲಲು
ಸೀತೆ ತನ್ನೊಳು ತಾ ಪಿಸುನುಡಿಯುತ -
ಸತಿ ನಿಂತಿಹಳು ಪೊಸಮಾಲೆಯನು ಕರದಿ ಪಿಡಿದು

ಸಭೆಗೈತಂದ ರಾವಣನು
ಎದೆ ಸೆಟೆಸುತ ಎದ್ದುನಿಂತ
ಧನುಸ್ಸನ್ನೆತ್ತುವೆನೆಂದು ಜಂಬದಿಂ ಬೀಗುತ
ಹಮ್ಮಿನಿಂ ನೋಡುತಲಿ ಎಲ್ಲರನು

ಕ್ಷಣ ನಡುಗಿದಳು ಭಾಮಿನಿ
ರಾವಣನೆದ್ದು ನಿಂತುದನು ಕಂಡು
ಭಯದಿ ಬೆವರಿದಳು ಸೀತೆ
ನಡುನಡುಗುತ ತರಗೆಲೆಯ ತೆರದಿ

ಶಿವಧನುಸ್ಸಿನೆಡೆ ನೋಡುತ ರಾವಣ
ಕಿರು ಬೆರಳಿಗೆ ಸಮವಿದೆಂದು ಹೇಳುತ
ಎತ್ತಲೊಲ್ಲನು ಶಿವಧನುಸ್ಸನ್ನು ಅವನು
ಉಡುಗಿತೆಲ್ಲೊ ರಾವಣೇಶ್ವರನ ಶಕ್ತಿ

ಗಡಗಡನೆ ನಡುಗುವನು
ಹಿಡಿದವನು ಅಲುಗಿಪನು
ಭೂಭಾರದ ಧನುಸ್ಸು ಶಿವಶಕ್ತಿ ಸಂಕೇತ
ಮೇಲೇಳಲೊಲ್ಲದು ಭೂಮಿತೂಕದ ಭಾರ

ಬೆವರಿಳಿಯಿತು ಮೊಗದೊಳು
ಬವಳಿ ಬಂದು ಬೆಂಡಾದನು ರಾವಣನು
ಅವಮಾನದಲಿ ಲಂಕಾಧೀಶ
ದುರದುರನೆ ನಡೆದ ಸಭೆಯ ತೊರೆದು

ಬಂದನಲ್ಲಿಗೆ ಶ್ರೀರಾಮಚಂದ್ರ ವಿಶ್ವಾಮಿತ್ರ ಸಹಿತ
ಬಂದು ನಿಂದನು ಅರಮನೆಯ ಹೊರಗೆ
ಭರದಿ ಬಂದರು ಪುರಜನರು ಕರೆದು ತಂದರು ಒಳಗೆ
ಸುರ ಸುಂದರಾಂಗನ ಕೋದಂಡ ರಾಮನ

ಬಂದು ನಿಂದರು ಪುರಜನರು ಸಭೆಯೊಳಗೆ
ಮುಂದೆ ಬಂದವರ ಹಿಂದೆ ದೂಡುತಲವರು
ಊರ್ಧ್ವ ಪುಂಡ್ರದಲಿ ಶೋಭಿಸುತಿಹನ
ಕೋದಂಡರಾಮನ ನಿಂತು ನೋಡುತಿರ್ದರಾಗ

ಎತ್ತಿದನು ಶ್ರೀರಾಮಚಂದ್ರ ಎತ್ತಿ ಮೆರೆಸಿದನು
ಮತ್ತಾರು ಎತ್ತದಂತಹ ಶಿವಧನುಸ್ಸನೆತ್ತಿದನು
ಸಕಲ ಬಾಂಧವರ ಸಮ್ಮುಖದಲ್ಲಿ ಸೀತೆ
ಅಕಳಂಕ ಮಹಿಮನ ಕೊಂಡಾಡುತ ಮನದಿ

ನಡೆತಂದಳು ಸತಿ ಪ್ರಿಯಕರನ ಬಳಿಗೆ
ಇಡುತ ಹೆಜ್ಜೆಯ ಸೀತೆ ಹರುಷದಿ ನಿಂದು
ಪೂಸಮಾಲೆ ತೊಡಿಸಿದಳು ಮಧುಮೂರ್ತಿಗೊಲಿದು
ಹಸನಾದ ಭಾವದಿ ನಸುನಗುತ ಪ್ರಮದೆ

ಕರೆಯ ಕಳಿಸಿದ ಜನಕ ಬೀಗರ
ಕರೆದು ಕೊಟ್ಟ ಬಳುವಳಿಗಳ ಸಹಿತ ಸೀತೆಯ
ಮುತ್ತು ಮಣಿ ನವರತ್ನ ಮಾಲೆಗಳನ್ನಿತ್ತು ಪಿತ
ಪೀತಾಂಬರಗಳಾದಿ ಸಕಲ ದ್ರವ್ಯಗಳನಿತ್ತು

ರಥ ಕುದುರೆ ಆನೆ ಪದಾತಿ ಜನ ಸಹಿತ
ಕುಂದಿಲ್ಲದ ಮರ್ಯಾದೆ ಗೈದು ಜಾನಕಿಯು
ಹರಸಿದ ಮಿಥಿಲೆಯರಸ ಮೈಥಿಲಿಯನು
'ಹೆಸರ ತಾರಮ್ಮ ತಾಯಿ ತೌರಿಗೆ' ಎಂದನಾ ಅರಸ

'ಕಂಡಿಲ್ಲ ನೀ ತೌರಲ್ಲಿ ಕಷ್ಟಗಳ ಸುರಿಮಳೆಯ
ದುಂಡು ಕೆನ್ನೆಗೆ ದೃಷ್ಟಿ ಬೊಟ್ಟಿಟ್ಟು ತಾಯಿ
ಕೊಂಡಾಟದಲಿ ಬೆಳೆಸಿದಳು ನಿನ್ನ, ಮಗಳೆ
ಆಡುತ ಹಾಡುತ ನೀ ಬೆಳೆದೆ ಇಲ್ಲಿ ಹರವಾಗಿ'

'ನೆನೆಯದಿರಮ್ಮ ನೀನೆಂದೂ ಜನನಿ ಜನಕರ
ನನಸಾಗಲಿ ತಾಯಿ ನಿನ್ನ ಕನಸುಗಳರಳಿ
ನಕ್ಕುನಗುತಲಿ ಸ್ವರ್ಗಸುಖವನು ಅನುಭವಿಸು
ಹೊಕ್ಕಮನೆಗೆ ಹೂವಾಗು ಹುಲ್ಲಾಗಬೇಡ' ವೆಂದ

ಹರಿಹರರ ನೆನೆದು ಹೊಸಲು ದಾಟಿದಳು ಭದ್ರೆ
ಶ್ರೀರಾಮನೊಡಗೂಡಿ ನಡೆದಳಾಸತಿ ತನ್ನರಮನೆಗೆ
ಹೊರೆ ಹೊತ್ತು ನಡೆದರು ಸೇವಕರು ಹಿಂದೆ
ಶ್ರೀರಾಮನ ಪ್ರಿಯ ಸಖರು ನಡೆದರು ಮುಂದೆ

ನಡುಗಲು ಭುವಿಯು ಪಾಪಸ್ಪರ್ಶಕೆ ಅಂಜಿ
ನಡುಗಿದರು ಇವರೆಲ್ಲ ಭುವಿನಡುಗುವುದ ಕಂಡು
ನುಡಿದರು ಗುರು ವಸಿಷ್ಠರು ಬರುತಿಹನು ಪರಶುರಾಮ
ಅಡಿ ಇಡುತಿಹ ಅವನ ಕಂಡು ಬೆದರಿಹುದು ಭುವಿಯು

ಜಮದಗ್ನಿಯ ಮಗನು ರೇಣುಕೆಯ ಕೊಂದವನು
ಜನನಿಯ ಕೊಂದ ಪಾಪ ಮಡುಗಟ್ಟಿಹುದು ಅವನಲ್ಲಿ
ಮುಕ್ಕೋಟಿ ತೀರ್ಥ ಸ್ನಾನ ಮಾಡಿ ಬಂದಿಹನು
ಕಳೆಯುವುದೆ, ತಾಯ ಕೊಂದ ಪಾಪವಿಂದು

ಕೊಡಲಿ ಹಿಡಿದು ಬಂದ ಪರಶುರಾಮನ
ಕಂಡಳು ಸತಿ, ಹಿಡಿಯಲಿಹ ರಕ್ತದ ಕಲೆಯು
ತೊಳೆದರದು ಪೋಪುದೇ? ತಾಯಕೊಂದ ಪಾಪದ ಫಲವು
ಕಳೆಯದೆಂದೂ ಮುಕ್ಕೋಟಿ ತೀರ್ಥ ಸ್ನಾನದಲಿ

ತಾಯಕೊಂದಿರಬಹುದು ಪರಶುರಾಮನು
ತಂದೆಯ ನುಡಿ ನಡೆಸಿಕೊಟ್ಟ ಧೀರನಿವನು
ಇಬ್ಬಗೆಯ ಸಂಕಟದಲಿ ಮುಳುಗಿ ಸೋತವನು
ಶ್ರೀರಾಮಚಂದ್ರನಿಗೆ ಸರಿಸಾಟಿ ಇವನು

ಸತ್ಕರಿಸಿದರೀರ್ವರು ಪರಶುರಾಮನ
ಅರ್ಘ್ಯಪಾದ್ಯಾದ್ಯುಪಚಾರಗಳಿಂದವನ
ಸಂಪ್ರೀತನಾದ ಪರಶುರಾಮ ಕೊಟ್ಟನೊಂದು
ದಿವ್ಯಾಸ್ತ್ರ ಶ್ರೀರಾಮಚಂದ್ರನಿಗೆ ಹರಸಿ

ಪಡೆದು ಅಸ್ತ್ರವನು ಪ್ರಭು ನಡೆದನು, ಸತಿಯೊಡನೆ
ಸಡಗರದಿಂದಡಿಗಡಿಗು ಸತಿಯ ನೋಡುತ
ನಡೆದಿರಲು ಪತಿ ಸಂಭ್ರಮದಿ ಅರಮನೆಗೆ
ನಡೆದಳಾ ಕಾಂತೆ ಶ್ರೀಕಾಂತೆ ಪತಿಯೊಡಗೂಡಿ

ಸತಿಯತ್ತ ತಿರುಗಿ ನೋಡುತ ಶ್ರೀರಾಮಚಂದ್ರ
ನತ್ತು ಮೂಗಲಿ ಮಿಂಚುವುದ ಕಂಡು ಕಾಂತ
ಗತ್ತಿನಿಂದೊಮ್ಮೆ ಜಂಬದಿಂ ಬೀಗುವನು ದಾಶರಥಿ
'ಎಂಥ ಚೆಲುವು ಇವಳದೆ'ಂದುಕೊಳ್ಳುತ ಪ್ರಾಣಕಾಂತ

ಪೇಳುವನು ತಾಟಕೆಯ ವಧೆಯ ಕತೆಯ
ಕೇಳುವಳು ವಲ್ಲಭೆ ಪ್ರಾಣಕಾಂತನ ಕಥನ ಶೈಲಿಯ
ಗೌತಮನ ಸತಿ ಅಹಲ್ಯೆ ಶಾಪ ಮುಕ್ತಳಾದ ಕತೆಯ
ಕೇಳುತಲೆ ದಾರಿ ಸಾಗುವುದು ಸುಖದಿ

ಮೋದಪಡುತಲಿ ಮಾನಿನಿ ನಡೆದಿಹಳು
ಆದರಿಸುತ ಪತಿ ಪ್ರಿಯವಲ್ಲಭೆಯ ನಡೆದಿರ್ದ
ಚತುರಂಗ ಬಲ ಸಹಿತ ಹೊರಟ ದಿಬ್ಬಣವು
ಚಂದದಿಂ ಕರೆತಂದಿತು ಅರಮನೆಗೆ ಅವರನ್ನು ||

## ಪುರಪ್ರವೇಶ ಮತ್ತು ಸ್ವಜನರ ಹಿತಾಸಕ್ತಿ

ಗಗನ ಚುಂಬಿಗಳು ಮೊಳಗಿದುವು
ಗಗನದೆತ್ತರ ಹಾರಿದುವು ಮತಾಪುಗಳು
ಸಿಡಿದುವು ಸಿಡಿಮದ್ದುಗುಂಡುಗಳು ನಭದೆತ್ತರಕೆ
ನಾಡು ಬಂತೆಂದು ಹಿಗ್ಗಿದಳು ಸತಿ ಸೀತೆ

ಭೂಮಿ ತಾಯಿಯ ಮಗಳು ಭೂಮಿಕಾ ಇವಳು
ಭೂಮಿ ತೂಕದ ಸತಿ ಮಾನಿನಿಯು ಇವಳು
ಕಾಮಿತಾರ್ಥಗಳನೀಡೇರಿಸುವ ಮಹಾಸತಿ ಇವಳು
ಧರ್ಮವಂತಳು ಇವಳು ಧಾರಿಣಿಯ ಮಗಳು

ಹತ್ತು ಜನರು ಬಂದು ಮುತ್ತಿದರು ಶುಭಕೋರಿ
ಎತ್ತಿದರು ಅತ್ತೆಯರು ಮುತ್ತಿನಾರತಿಯ
ಮುತ್ತಿನಂತಹ ಸೊಸೆ ಶ್ರೀದೇವಿಗೆ ಶ್ರೀಲಕ್ಷ್ಮೀಗೆ
ಹತ್ತು ಮಾತುಗಳನಾಡದ ಸಿರಿದೇವಿಗೆ

ಉತ್ತಮ ಕುಲದ ಕುಲನಾರಿಗೆ
ಎತ್ತಿದರು ಅತ್ತೆಯರು ಮುತ್ತಿನಾರತಿಯ
ಸುತ್ತಿ ಸುಳಿದು ಓಕುಳಿಯ ಚೆಲ್ಲಿದರು ಹೊರಗೆ
ಮತ್ತೆ ಮುತ್ತಿಟ್ಟು ನೆತ್ತಿಗೆ ಬರಮಾಡಿಕೊಂಡರು ಅವಳ

ಅತ್ತೆಯರೆಲ್ಲ ಬರಮಾಡಿಕೊಂಡರು ಸೊಸೆಯ
ಮೆತ್ತನ್ನ ಮನದ ಮಾಣಿಕ್ಯದ ಸಿರಿಯ
ಅತ್ತೆಮಾವರ ಅನುಸರಿಸುತ ಅವಳು
ಮತ್ತೆ ಮೈದುನರೊಡಗೂಡಿ ಸತಿ ಸೀತೆ ಇದ್ದಳಲ್ಲಿ

ಅರಮನೆಯೊಳಗೆಲ್ಲ ಮನೆಮಾತಾದಳು ದೇವಿ
ಪುರಜನರೆಲ್ಲರ ಪ್ರೀತಿಯಗಳಿಸಿ ಜಾನಕಿ
ನಗುನಗುತ ಬಾಳಿದಳು ಮನೆಯೊಡತಿಯಾಗಿ
ಸಗ್ಗ ಸುಖವಿದೆಂದು ನಂಬಿ ನಡೆದಳು ಸತಿ ಸೀತೆ

ಜನನಿ ಜನಕರ ಮನದಲಿ ನೆನೆಯುತ
ಅತ್ತೆಮಾವರಿಗೆ ತಕ್ಕ ಸೊಸೆಯಾದಳು
ಅಕ್ಕ ತಂಗಿ ಅಣ್ಣ ತಮ್ಮರೆಂದು ಕರೆಯುತ
ನಕ್ಕು ನಗುತ ಸತಿ ಮನೆ ಒಳ ಹೊರಗೆಲ್ಲ ಬೀಗುತಲಿ

ಬಿತ್ತಿದಳು ಧರ್ಮ ಬೀಜವ ಗರತಿ
ಸತಿ ಸ್ವಜನಪಕ್ಷಪಾತವ ಮಾಡದೆ
ನಡೆನುಡಿ ಒಂದಾಗಿ ಸುಜ್ಞಾನದಿ ಮೆರೆದಳು
ಅಡಿಗಡಿಗು ಸತಿ ಧರ್ಮವ ಸಾರುತಾ ಸೀತೆ ॥

## ಪಟ್ಟಾಭಿಷೇಕ ಸನ್ನಾಹ

ಇಂತಿರಲೊಂದು ದಿನ ಪಟ್ಟಾಭಿಷೇಕವಂ ನೆನೆದು
ಹಗಲುಗನಸುಗಳ ಪೊತ್ತ ದೊರೆ ದಶರಥ
ಹಂಬಲಿಸಿ ಹಂಬಲಿಸಿ ಜ್ಯೇಷ್ಠ ಪುತ್ರನಿಗೆ
ಸಂಭ್ರಮದಿ ಸಾರಿದನು ಅರಸ ಅರಮನೆಗೆಲ್ಲ

ಅಗ್ರಜ ರಾಮನಿಗೆ ಪಟ್ಟವಂ ಕಟ್ಟುವೆನೆಂದ
ಸ್ವಗ್ರಾಮದಲಿ ಪಟ್ಟಾಭಿಷೇಕವಂ ಮಾಳ್ಪ ಭರದಿ
ಕರೆಸಿ ವಸಿಷ್ಠ ವಾಮದೇವರ ಪೇಳ್ದನು ಅರಸ
ಇದ್ದರೆ ಸನಿಹದಲಿ ಶುಭದಿನವು ಪೇಳಿರೆಂದ

—

ಸುದ್ದಿಯ ಅರುಹಿದನು ಅರಸ ಪ್ರಮುಖರಿಗೆ
ನಿದ್ದೆಯಲಿ ದೊರೆ ಹೊಂಗನುಸಗಳ ಕಾಣುತ
ನಿರೀಕ್ಷಿಸುತ ಎಂದು ಬರುವುದು ಸುದಿನವೆಂದು
ಶ್ರೀರಾಮಚಂದ್ರನ ಪಟ್ಟಾಭಿಷೇಕವಂ ಕಾಂಬ ತವಕ ದೊರೆಗೆ

ಬರಬರನೆ ಬಂದಳು ಅರಮನೆಯ ದಾಸಿ
ಹೊರಹೊರಗೆ ಸುತ್ತಿ ಊರೆಲ್ಲ ತಿರುಗಿ
ಕಜ್ಜಿ ಮೋರೆಯ ಉಬ್ಬಿದೊಸಡಿನ ಮಂಥರೆ
ಲಜ್ಜೆ ಇಲ್ಲದೆ ಅಂಡಲೆದಳು ಎಲ್ಲೆಲ್ಲು ನಿಲ್ಲದೆ

ಬೊಚ್ಚುಬಾಯಲಿ ಲೊಚಗುಡುತ ಹಲ್ಲಿಯಂತೆ
ಚಂಚಲ ಚಿತ್ತದ ಮುದುಕಿ ನಿಂತಲ್ಲಿ ನಿಲ್ಲದೆ
ಚಪ್ಪರ ತೋರಣ ಚುಕ್ಕಿ ರಂಗವಲ್ಲಿಯ ಕಂಡು
ಬೆಚ್ಚುತಲಿ ಮಂಥರೆ ಅತ್ತಿತ್ತ ತಿರುಗಿದಳು ಮತ್ತೆ

ಬಂದಳಾಗಲೆ ಕೈಕೆಯ ಬಳಿಗೆ ಮುದುಕಿ ಹಠವಾದಿ
ಅಂದಳು ಒಡತಿಗೆ ಪ್ರಭುಕೊಟ್ಟ ವರದ ನೆನಪ ತಂದಳು
'ಕೇಳು ಅರಸನಲಿ ಭರತನಿಗೆ ಪಟ್ಟವಂ ಕಟ್ಟುವಂತೆ
ಕಳುಹಲಿ ಶ್ರೀರಾಮನ ಹದಿನಾಲ್ಕು ವರ್ಷ ವನಕೆ'

ಚತುರೆ ಛಲವಾದಿ ಅಂದಳಾ ಒಡತಿಗೆ
'ಕೇಳು ಅರಸನಲಿ ನಿನಗಿದೆ ಎರಡು ವರವು
ಕೇಳು ಸತಿ ನಿನ್ನ ಕಷ್ಟದಲಿ ಇದು ವರವಾಗಲಿ
ಅನುಭವಿಸು ರಾಜಮಾತೆಯ ಸುಖಭೋಗವನು ದೇವಿ'

ಕುಂತಳು ಅವನತಮುಖಿಯಾಗಿ ಕೈಕೆ
ಕಾಂತ ಬರುವ ಕಾಲವನರಿತು ರಾಣಿ
ಅರಸ ದಶರಥನು ಬರಲು ಪ್ರಿಯಸತಿ
ಕರೆದವನ ತೋಳ್‌ತೆಕ್ಕೆಯಲಿ ತಬ್ಬಿಕೊಳ್ಳುತ

ಭರತ ಇರಲಿಲ್ಲ ಬಳಿಯಲ್ಲಿ
ಇದ್ದನವ ಸೋದರ ಮಾವನ ನೆರಳಲ್ಲಿ
ಸರಿ ಇದು ಸನ್ನಿವೇಶವೆಂದು ಕೊಂಡಳು ಕೈಕೆ
ಪಿರಿಪಿರಿ ಮಾಡುತ ದೊರೆ ದಶರಥನಿಗೆ

ಕೇಳಿದಳು ಕೈಕೆ ದಶರಥನ ಕಿರಿಪತ್ನಿ
'ಹೇಳುವೆನು ಕೇಳಿರಿ ದೊರೆಯೆ ಎರಡು ವರ ಉಂಟು
ಕೊಡಲದು ನಿಮಗೀಗ ಸಮಯದೊರೆಯೆ
ದೂರದಿರಿ ಎನ್ನ, ಕೊಟ್ಟ ಮಾತದು ಕಡೆಯವರೆಗಿರಲಿ'

ನೋಡಿದಳು ಕೈಕೆ ದಶರಥನ ಮೊಗವ
ಕಾಡಿತವಳನ್ನು ಒಂದು ಕ್ಷಣ ನೋವು
ಬೇಡ ಬೇಡವೆಂದಿತು ಮನಸ್ಸು ಅರೆಗಳಿಗೆ
ಕಡೆಗಳಿಗೆಯಲಿ ರಾಜ್ಯದಾಸೆ ಬಲಿಯಿತವಳಲ್ಲಿ

ಪೇಳಿದಳು ಪತಿಯೊಡನೆ ಪ್ರಿಯದಿ
'ಹೇಳುವೆನು ದೊರೆ ನೀ ಕೊಟ್ಟ ವರವ ನಡೆಸಿಕೊಡು
ಭರತ ಈ ಧರೆಗೆ ದೊರೆಯಾಗಲಿ, ಪ್ರಭು,
ಶ್ರೀರಾಮ ಅನುಭವಿಸಲಿ ಹದಿನಾಲ್ಕು ವರ್ಷ ವನವಾಸ'

'ಕೊಟ್ಟ ಮಾತಿಗೆ ತಪ್ಪಿ ನಡೆದರೆ
ಕೆಟ್ಟ ಮಾತು ಬರುವುದು ತಪ್ಪದೆಂದು
ಇಟ್ಟ ಪ್ರೀತಿಗೆ ತೆರುವ ಬೆಲೆ ಇದು ನೋಡು
ಕೊಟ್ಟ ಮಾತಿನಂತೆ ನಡೆದರೆ ಸತ್‌ಕೀರ್ತಿ ನಿನಗುಂಟು'

'ಕೊಟ್ಟ ಮಾತಿಗೆ ತಪ್ಪಿ ನಡೆಯದವ ನೀನು
ಇಟ್ಟ ಪ್ರೀತಿಗೆ ಬೆಲೆ ಇದೆಂದು ತಿಳಿವೆ ನಾನು
ಇಲ್ಲವೆನ್ನುವುದು ಸಲ್ಲದೆಂದಿಗು ನಿನಗೆ
ಬಲ್ಲವನು ನೀನು ಕೊಟ್ಟ ಮಾತಿಗೆ ಬೆಲೆ ಕೊಡುವಾತ'

ಹೇಳಿದಳು ಮಂಥರೆಯ ಮಾತಿಗೆ ಮಣಿದು ಕೈಕೆ
ಮರೆತಳು ಶ್ರೀರಾಮನಲ್ಲಿಟ್ಟ ಸಕ್ಕರೆಯಂತಕ್ಕರೆಯ
ಇರಿಸು ಮುರಿಸಿಲ್ಲದೆ ನುಡಿದಳು ಪತಿಯೊಡನೆ
ಕರಗಲಿಲ್ಲ ಮನವು ಕೈಕೆ ಕಲ್ಲಾಗಿರ್ದಳಾಗ

ನೆನೆದ ದಶರಥ ಕೊಟ್ಟವರವದೇಕೆಂದು
ನೆನಪೊಳಗೆ ದೊರೆ ಮೂಕ ಪಶುವಿನಂತಾದನಾಗ
ಏಕಿಂಥ ಅಸೂಯೆ ಸತಿಗೆ ತರವಲ್ಲವಿದೆಂದು
ಏಕಾಂತದಲಿ ದೊರೆ ಕೆಟ್ಟ ಹಠ ಬಿಡೆಂದರುಹಿದ ಸತಿಗೆ

ದೊರೆ ಮರುಗಿ ಎದೆಬಿರಿದು ಗೋಳಿಟ್ಟನೊಮ್ಮೆ
'ಹೊರೆಯಾದಳಲ್ಲ ಸತಿ ವಿಷಯ ಲಾಲಸೆಗೆ ಸಿಲುಕಿ
ಮರೆಯ ಬಲ್ಲುದೆ ಜಗವು ಈ ಪರಿಯ ಕೃತಿಗೆ
ಬರಬಾರದೆ ಇವಳಿಗೆ ಸದ್ಭಾವ ಪ್ರೇಮವೆಂದೆ' ನುತ

ದೊರೆ ಪೇಳಿದನು ಬಗೆ ಬಗೆಯಲಿ ಸತಿಗೆ
ಬರಲಿಲ್ಲ ಅವಳಲ್ಲಿ ಭಾವ ತುಂಬಿದ ಪ್ರೇಮ
ಸೋಲಲಿಲ್ಲವಳು ಶ್ರೀ ವಲ್ಲಭನ ಮಾತಿಗೆ
ಕನಲುತ ದೊರೆ ಕುಸಿದು ಕುಳಿತನಾಗ

ಸುದ್ದಿ ಬಂದಿತು ಶ್ರೀರಾಮಚಂದ್ರನಿಗೆ
ಸದ್ದಿಲ್ಲದೆ ಬಂದ ಶ್ರೀರಾಮ ಕೈಕೆಯ ಬಳಿಗೆ
ಮುದ್ದು ಮೊಗದವ ಕ್ಷಾತ್ರ ಧರ್ಮ ಬಿಡದವ
ಮುದ್ದು ಮಾತಿನ ಮಳೆಗರೆದನು ವಂದ್ಯ

'ತಾಯಿ, ವ್ಯಸನವದೇಕೆ? ಇದು ದೈವಕೃಪೆ
ಕಾಯುವುದೆಮ್ಮನದು ನಾ ಬಲ್ಲೆ ತಾಯಿ
ಯುಗವು ನಿಮಿಷವಾಗುವುದು ದೈವಕೃಪೆ ಇರಲು
ನಗುನಗುತ ಕಳುಹಿಸಿಕೊಡಿರೆನ್ನ' ಎಂದನಾ ರಾಮ

'ಹರಸಿ ಕಳುಹಿಸಿ ಹರಷದಿಂದೆನ್ನ ಪ್ರಭು
ಹರಿಹರರ ಕೃಪೆ ಇದೆಂದು ನಾ ತಿಳಿಯೆ
ನೀವೇಕೆ ಚಡಪಡಿಸುವಿರಿ ಪ್ರಭು
ಕಾವುದೆನ್ನ ಮೈ ಕೊಂಕದಂತೆ ನಿಮ್ಮ ಶ್ರೀ ರಕ್ಷೆ ಇರಲು'

ಪಟ್ಟೆ ಪೀತಾಂಬರ ಬಿಚ್ಚಿಟ್ಟು ಉಟ್ಟ ನಾರುಮಡಿ
ಕೊಟ್ಟ ಸಕಲ ಚಿನ್ನಾಭರಣಗಳ ತಾಯ ಕೈಗೆ
ಎದೆ ಬಿರಿದು ದುಃಖ ಉಕ್ಕಲು ಹೃದಯದಿ ಮುಚ್ಚಿಟ್ಟು
ನಿಂದ ಶ್ರೀರಾಮ ಎದೆ ಸೆಟಿಸಿ ಹೆತ್ತವರ ಮುಂದೆ

ನೆನಪುಗಳು ಮಂಥರೆಯ ಮಥಿಸುತಿರಲು
ಮನೆವಾಳಿಕೆಯ ಮರೆತು ಮುದುಕಿ ನೆನೆಯುವಳು
ಪದರಗಳೊಂದೊಂದು ಹೊರಬಂದು ತೆರಕೊಳ್ಳುವುದು
ಗತಿಸಿದ ದಿನಗಳ ನೆನಪುಗಳ ಸ್ಮರಣೆಯಲ್ಲಿ

ಅರಮನೆಯೊಳಗೆಲ್ಲ ಕಡೆಗಣಿಸಿದ್ದರವಳನ್ನು
ಹೊರ ಹೊರಗೆ ಒತ್ತರಿಸಿ ಅವಳ ಮೆರೆದವರೆ ಎಲ್ಲ
ಕೊಡಲಿಲ್ಲವಳಿಗೆ ಸ್ಥಾನಮಾನಗಳ ಓರಗೆಯವರು
ಒಡತಿ ಹೃದಯದಿಂದವಳ ಪ್ರೀತಿಸಲಿಲ್ಲ

'ಜಡವಾದ ದರಿದ್ರಮುಖದವಳೆ'ಂದು
ಜರೆದರು ವಿಧವಿಧದಿ ಅವಳನ್ನು ಇದಿರಿದಿರು
ಒಳಗೊಳಗೆ ಬೆಳೆದಿತ್ತು ದ್ವೇಷ ಹೊಗೆಯಾಡುತ
ಮುದುಕಿ ಕಸಿವಿಸಿಗೊಂಡಳು ಇವರ ಪರಿಗೆ

ಕರೆದು ಮಾತನಾಡರು ಒಳ್ಳೆ ಮಾತಿನಲಿ
ಯಾರಿಗಿದೆ ಇವಳಲ್ಲಿ ಕರುಣೆ ಮರುಕ
ಎಸೆಯುವರು ಉಟ್ಟು ಬಿಟ್ಟ ಸೀರೆಗಳ
ಹೊಸ ಪತ್ತಲವೆಂದು ಕೊಟ್ಟವರಲ್ಲ ಅವಳಿಗೆ

ಕೊರಗಿದಳು ಮಂಥರೆ ಒಳಗೊಳಗೆ
ವಿಷ ತುಂಬಿರಲು ಹೃದಯದಿ ಫೂತ್ಕರಿಸಿದಳು
ನತದೃಷ್ಟ ಮುದುಕಿ ಮಂಥರೆ ನೆನೆದಳು
ಸೇಡು ಫಲಿಸಿತು ಎಂದು ಹರ್ಷಿಸಿದಳು

ಅರಮನೆಯ ಬಿಟ್ಟು ಹೊರಟ ಸೌಮಿತ್ರಿ
ಅಗ್ರಜನ ಜೊತೆಗೂಡಿರಲು ಮುದದಿ
ಬಂದಳಲ್ಲಿಗೆ ಸತಿ ಸೀತೆ ವಿಷಯವನರಿತು
ನಿಂದಳು ಇನಿಯನ ಬಳಿ ಬರುವೆ ತಾನೆನುತ

'ಸಹಧರ್ಮಿಣಿ ಪತಿಯನುಚರಳು' ಎನುತ
'ಬಹೆನು ನಾ ನಿಮ್ಮೊಡನೆ ಬೇಡವೆನ್ನದಿರಿ' ಎಂದಳು
'ಸತಿ ಮತಿವಂತೆ ನೇಮವನೆಂದು ಮುರಿಯಲೊಲ್ಲಳು,
ಪತಿ ನುಡಿದ, ಭಾರ್ಯೆ ನೀನಿಲ್ಲಿರುವುದು ಹಿತವು'

'ಅಹುದಹುದು ದೇವಿ ನಾನಿಹೆನು ಅಗ್ರಜನೊಡನೆ
ಬಹು ಕಠಿಣವದು ದಾರಿ ನೀವಿಲ್ಲಿರಿ ಸುಮ್ಮನೆ
ಸುಕೋಮಲಕಾಯ ನಿಮ್ಮದೆಂದ ಸೌಮಿತ್ರಿ
ಸಕಲ ಕಷ್ಟಗಳು ನಮಗಿರಲಿ ಕಳುಹಿಸಿ ಕೊಡಿ' ಎಂದ

ಕೇಳಲೊಲ್ಲದೆ ಸೀತೆ ಪತಿಯನನುಸರಿಸಿದಳು
ಕೇಳಿದನು ಶ್ರೀರಾಮ 'ಸಹಿಸಬಲ್ಲೆಯ ಕಷ್ಟಗಳ'
'ಪತಿ ಇರಲು ಬಳಿಯಲ್ಲಿ ನೂರುಕಷ್ಟಗಳಿರಲಿ'
ಸತಿ ನುಡಿದಳು 'ನಿಮ್ಮ ಕರುಣೆ ನನಗಿರಲಿ'

ಮಂಗಳಾಂಗಿನಿ ಸಿಂಧೂರ ತಿಲಕ ಸಂಜಾತೆ,
ಶೃಂಗಾರ ವೈಭವಗಳ ತೊರೆದುಟ್ಟಳು ನಾರುಮಡಿ
ಭೂದೇವಿಯ ಮಗಳು ಭೂಮಿಕಾ ಇವಳು
ಭೂಮಿ ತೂಕದ ಹೆಣ್ಣು ಶ್ರೀರಾಮನ ಕಣ್ಣು

ಜನಕರಾಜನ ಕುವರಿ ಜಾನಕೀದೇವಿ
ಕನಸು ಮನಸಲು ಪತಿಯನ್ನೇ ನಂಬಿ -
ನಡೆದಳು ಶ್ರೀಕಾಂತನ ಜೊತೆಗೆ ಜೊತೆಯಾಗಿ
ನಡೆದಳು ವಲ್ಲಭೆ ನಗುನಗುತ ಪತಿಯೊಡನೆ

ಬಂದಳಾಗ ಕೌಸಲ್ಯೆ ಕೋಸಲ ದೇಶದವಳು
ಕುಂದಿದ ಮನದಲ್ಲಿ ನಿಂದಳು ಸೀತೆಯ ಸನಿಹ
ಮಾಡಿದಳು ಗುಣಗಾನ ಮಾತೆ ಶ್ರೀರಾಮಚಂದ್ರನ ಕುರಿತು
ಆಡುತಾಡುತ ಬೆಳೆದವನು ನನ್ನರಗಿಣಿಯು

ನನ್ನ ರಾಮನು ಅರಮನೆಯಲ್ಲರಳಿದವನು
ಅನ್ನ ವಸ್ತ್ರಗಳಿಗೆ ಕೊರತೆಯಿಲ್ಲದೆ ಬೆಳೆದವನು
ಚಿನ್ನದ ಬಟ್ಟಲಲಿ ಉಂಡು ಕೈತೊಳೆದವನು
ಹಂಸತೂಲಿಕಾ ತಲ್ಪದಲಿ ಮಲಗಿದವನು

'ಹಸುಮಗುವಿನಂಥವನು ಬಣ್ಣನೆಗೆ ಸಿಗದವನು
ಕುಸುಮ ಕೋಮಲನು ಗುಣವಂತನು
ಹಸನಾದ ಭಾವ ಹೊಂದಿದವನು ಶ್ರೀರಾಮ
ಕಸುವುಳ್ಳ ಸತ್ವಶಾಲಿಯು ಎನ್ನ ಹೃದಯದ ರಾಮ'

'ನಿನ್ನ ನೆರಳು ಅವನಿಗಿರಬೇಕು ಮಗಳೆ
ನಿನ್ನ ಒಡವೆಗಳು ನಿನ್ನ ಬಳಿ ಇರಲಿ
ಧರಿಸಿಕೋ ಮಗಳೆ ಅದು ನಿನ್ನ ಸೌಭಾಗ್ಯದ ಕುರುಹು
ಧರಿಸಿ ನೀ ಹೊರಡು ಮದುಮಗಳಾಗಿ'

‘ಉಡಬೇಕಿಲ್ಲ ನೀ ನಾರುಮಡಿ ಬಟ್ಟೆಗಳ
ಉಡಬೇಕಿಲ್ಲ ನೀ ನಮ್ಮರಮನೆಯ ಭಾಗ್ಯನಿಧಿ
ಉಡು ನೀನೀಗಲೇ ಪಟ್ಟೆ ಪೀತಾಂಬರವ
ಕಡೆತನಕ ನಿನ್ನ ನೀ ರಕ್ಷಿಸಿಕೋ ಮಗಳೆ’

ಅತ್ತೆ ಮಾತುಗಳ ಅಲಕ್ಷಿಸದೆ ಸತಿ ಸೀತೆ
ಮತ್ತೆ ಬಿಚ್ಚಿಟ್ಟ ಒಡವೆಗಳ ಧರಿಸಿದಳು
ಸತಿ ಪಟ್ಟೆಪೀತಾಂಬರವನುಟ್ಟು ಮರಳಿ
ಮಾತೆ ಕೌಸಲ್ಯೆಗೆ ಶಿರಬಾಗಿ ಪೊರಮಟ್ಟಳು ದೇವಿ

ಭೂಮಿಕಾದೇವಿ ಸಕಲ ಸೌಭಾಗ್ಯದ ಖನಿ ಇವಳು
ಭಾಮಿನಿಯು ದೇವಿ ಭೂತಾಯಿಯ ಮಗಳು
ಭೂಮಿ ತೂಕದ ಹೆಣ್ಣು ಶ್ರೀರಾಮನ ಕಣ್ಣು
ಮಮಕಾರದಲಿ ಮೈಮರೆತು ನಿಂತಿರಲು ಸತಿ

ಬಿರುಗಾಳಿ ಬಂದಂತೆ ಬಂದೆರಗಿದಳು ಊರ್ಮಿಳೆ
ಕರುಳು ಮಿಡಿವಂತೆ ನುಡಿದಳು ಅಂಗನೆ ತುಂಬಿದೆದೆಯಲ್ಲಿ
‘ಎಲ್ಲಿ ಹೋಗುವಿರಿ ನೀವೆಲ್ಲರೂ ನನ್ನ ತೊರೆದು
ಬಲ್ಲಿರಲ್ಲವೆ ನೀವು ನಾನು ಸೌಮಿತ್ರಿಯ ಸತಿಯು?’

ಮಣ್ಣುಮಾಡಲು ಬೇಡಿ ಕಣ್ಣು ತಪ್ಪಿಸಬೇಡಿ
ಸುಣ್ಣಕಲ್ಲಲಿ ನನ್ನ ಮಡಿಲ ತುಂಬಲು ಬೇಡಿ
ಬರುವೆ ನಾ ನಿಮ್ಮ ಜೊತೆಯಲ್ಲಿ ಬಂಧುಗಳೆ
ಹೊರಡದಿರಿ ಬಿಟ್ಟೆನ್ನ ಪ್ರಿಯರೆ! ಪಾರ್ಥಿವರೆ!

‘ಬೇಡುವೆನು ನಾ ಕೈಮುಗಿದು ನಿಮ್ಮನ್ನು
ಕಾಡದಿರಿ ನಾ ಬರುವೆ ನಿಮ್ಮ ಜೊತೆಗೆ
ನಾಡೊಳಗೆ ನಾನಿದ್ದು ಮಾಡುವುದೇನಿಹುದು?
ನಡೆಯುವೆನು ನಿಮ್ಮೊಡನೆ ತಡೆಯದಿರಿ ಎನ್ನ’

ಮಾರಜನಕ ಶ್ರೀರಾಮ ಕರುಣಾ ಸಾಗರ
ಬೆರಗುವಡೆಯುತ ನೋಡಿದನಾ ಸತಿಯ
'ಬರಲಿ ಊರ್ಮಿಳೆ ನಮ್ಮೊಡನೆ' ಎನಲವನು
ಸತಿ ಸೀತೆ ತಡಮಾಡದೆ ಉಸುರಿದಳಾಗ

'ನೀನಮ್ಮ ಧನ್ಯೆ ಸೋದರಿ ಇಹರಿಲ್ಲಿ ಹಿರಿಯರು
ವಲ್ಲಭೆ ನೋವಭಾರ ಇಳಿಸುವರು ಅವರು
ನೀನಿರಬೇಕಮ್ಮ ಈ ನೆಲೆಯಲ್ಲಿ ತಂಗಿ
ನಿನ್ನ ಬಿಟ್ಟರೆ ಇನ್ನಾರಿಹರು ಇವರಿಗೆ'

'ಬೇಕಮ್ಮ ನಿನ್ನ ಸಹಕಾರ ನಮಗೆಲ್ಲ
ಅಕ್ಕರೆಯ ತಂಗಿ ಅರಸೊತ್ತಿಗೆ ನಿನಗಿರಲಿ
ಅತ್ತೆ ಮಾವರ ಸೇವೆ ಮಾಡುವಂತಾಗು
ಪಡೆವೆ ನೀನಮ್ಮ ತೀರ್ಥಸ್ನಾನದ ಭಾಗ್ಯ'

'ಪತಿ ಸೇವೆ ಮಾಡುವುದು ಅವಭೃತ ಸ್ನಾನವಂತೆ
ಸತಿ ನಿನಗಿರಲಿ ತೀರ್ಥ ಸ್ನಾನದ ಭಾಗ್ಯ, ಎನಗಿರಲಿ ಅವಭೃತಸ್ನಾನ
ಈ ಜ್ಞಾನ ಸುಜ್ಞಾನದಲಿ ಮಿಂದು ನಾವೀರ್ವರೂ
ಅಜ್ಞಾನ ಅಂಧಕಾರವ ಅಳಿಸೋಣ ಬಾ ತಂಗಿ'

ಎನುತ ಸತಿ ಸೀತೆ ಅಪ್ಪಿಕೊಳ್ಳುತವಳನ್ನು
'ಚೆನ್ನಾದ ಮನದಿಂದ ಕಳುಹಿಸಮ್ಮ'
'ಅತ್ತು ಕರೆಯಲು ಬೇಡ ಮತ್ತೆ ಚಿಂತಿಸಬೇಡ
ಹೊತ್ತು ಕಳೆದಿದೆ ಹೋಗಲೆಮಗೆ ಸಮ್ಮತಿಸಮ್ಮ'

ಸುತ್ತೊಮ್ಮೆ ನೋಡುತ್ತ ಸತಿ ಪತಿಯ ನೆನೆದು
ಮತ್ತೆ ಮೌನದಲಿ ಆಲೋಚಿಸಿ ನುಡಿದಳಿಂತು
ನಿಜದ ಕಾರಣ ಗ್ರಹಿಸಿದಳಾಗ ಊರ್ಮಿಳೆ
ಸಜಲನಯನೆಯಾಗಿ 'ಹೋಗಿ ಬನ್ನಿ'ರೆಂದಳಾಗ

ಹೋಗಿ ಬನ್ನಿರೆಂದೆನುತ ಊರ್ಮಿಳೆ ನೆಮ್ಮದಿಯಲಿ
ಬಾಗಿದಳು ಬಾಲೆ ಹೊರಟು ನಿಂತವರಿಗೆ ಮುದದಿ
ಬಲ್ಲೆನಾಂ ಬದುಕುವ ಪರಿಯನೆಂದುಕೊಳ್ಳುತ
ಸಲ್ಲೀಲೆಯಿಂದ ಬೀಳ್ಗೊಡಲು ಬಂದಳಾಗ

ಹಿಂದೆ ನಡೆದ ಪುರವಾಸಿಗಳು ಅತ್ತೆಯರೆಲ್ಲ
ಮುಂದೆ ನಡೆಯದೆ ನಿಂತರಲ್ಲೆ ನೋಡುತ
ಕಣ್ಣೀರು ತುಂಬಿ ಹರಿಯಲು ಧರೆಗೆ
ಮಣ್ಣ ಕಣಕಣದಲಿ ಬೆರೆತು ಇಂಗಿತದು ಅಲ್ಲೆ

ಬಿನ್ನಾಣವಿಲ್ಲದ ಲಾವಣ್ಯವತಿಯರು
ಚೆನ್ನ ಶ್ರೀಲಕ್ಷ್ಮಿಯಂತಿರ್ದರಾಗ
ಎಂದೆಂದು ಸ್ಮರಿಸುವಂಥ ಇಂದಿರೆಯರು?
ಬಂಧನಗಳೆಲ್ಲವನು ಕಳಕೊಂಡರಾಗ

'ಈಶನ ದಯೆ ಇರಲು ಹಿಂದೆ ಬರುವೆವು ನಾವು
ಆಸೆಯಬಿಟ್ಟು ನೀವೀಗ ಹೋಗಿ' ರೆಂದ ಪ್ರಭು
ಹಿಂದೆ ಬಂದ ಪುರವಾಸಿಗಳು ತಾಯಿಯರು
ಸದ್ದಿಲ್ಲದೆ ನಡೆದರು ಪ್ರಭುವಿನಾಜ್ಞೆಯನು ಪೊತ್ತು

ಗಂಗಾನದಿಯ ತಟದಲಿ ಕೆಲಕಾಲ ತಂಗಿದರು
ಹಿಂಗದ ತೃಷೆಯು ಬಂಗಾರದ ಮಡುವು
ಸಂಗದಲಿ ಗುಹ ಸುಮಂತ್ರರಿರಲು ಸುಖಿಸುತ
ತಂಗಿದರು ಸೀತಾರಾಮಲಕ್ಷ್ಮಣರು ಕೆಲಕಾಲವಲ್ಲಿ

ನೆನಪುಗಳು ಬರತೊಡಗಿದವು ಸತಿ ಸೀತೆಗೆ
ನೆನೆದಳು ಮನದಲಿ ಹಿಂದಿನ ಜನ್ಮದ ಸ್ಮರಣೆಯ
ಗಂಗೆ ಸರಸ್ವತಿ ಲಕ್ಷ್ಮಿಯರು ವಿಷ್ಣುವಿನ ಪತ್ನಿಯರು
ಗಂಗೆ ತೋರಲು ಪ್ರೀತಿ ಪತಿಯ ಕಡೆ ಅತಿಯಾಗಿ

ಕೆರಳಿತು ಮನ ಮತ್ಸರದಿ ಸವತಿಯರೊಳಗೆ
ಯಾರ ಬಿಟ್ಟಿಹುದು ಈ ಮತ್ಸರ ಮೂಲೋಕದೊಳಗೆ?
ಸರಸತಿಯ ಶಾಪಕ್ಕೆ ನದಿಯಾದಳಾ ಗಂಗೆ
ಮರಳ ರಾಶಿಯ ತೊಡೆಯ ಮೇಲಾಡೊ ತುಂಗೆ!

ಸರಸತಿಯು ಮುನಿಸಿನಿಂ ಲಕ್ಷ್ಮಿಗಿತ್ತಳು ಶಾಪ
'ಮರಳಿ ಹುಟ್ಟು ಪಡೆ' ಎಂದವಳ ಶಪಿಸಿದಳು
ತುಳಸಿಯಾದಳು ಲಕ್ಷ್ಮಿ ಭೂಲೋಕದಲಿ ಜನಿಸಿ
ನಳನಳಿಸಿ ಪೂಜಿಸಲು ಧರ್ಮಧ್ವಜನ ಸುತೆಯಾಗೆ!

ವರವಿತ್ತಳು ತುಳಸಿ ಪುತ್ರಿಯಾಗುವೆನೆಂದು
ಧರ್ಮಧ್ವಜನಿಗೆ ಪುತ್ರಿಯಾದಳಿಂತು ತುಳಸಿ
ಕುಶಧ್ವಜನಿಗೆ ವೇದವತಿಯಾಗಿ ಜನಿಸಿದಳು
ಕುಶಲಮತಿ! ಶಂಬು ರಾವಣ ರಕ್ಕಸರಿವರು

ಬಯಸಿದರು ವೇದವತಿಯನೊಲಿದು
ಬಯಸಿದ ಶಂಬುವಂ ಹತಗೈದು ದೇವಿ
ಸಿಗದೆ ಹೋದಳು ರಾವಣನ ಕೈಗೆ ವಲ್ಲಭೆ
ಸಿಗದೆ ಹತಳಾಗಿ ಭಸ್ಮವಾದಳು ದೇವಿ

ಬಿಡದೆ ಭಸ್ಮವಂ ಹಣೆಗಿಟ್ಟು ಮೆರೆದ ರಾವಣ
ಕೇಡು ಸಂಭವಿಸುವುದೆಂದರಿಯದೆ ಭಸ್ಮವಂ ಧರಿಸಿ ರಾವಣ
ವಿಸ್ಮಯದಿ ವೀಕ್ಷಿಸುವನು ರಾವಣನು ಅದನು
ಭಸ್ಮವಂ ಬಿಡನು ಹಣೆಗಿಡುವುದನೆಂದು

'ಬೇಡ ನಿನಗೀತಾಪ ಕೋಪ' ಎಂದ ನಾರದನೊಮ್ಮೆ
'ಬಿಡು ನೀ ಭಸ್ಮವನು ನೀರೊಳೆಂದಾ
ಹೇಳಿದರು ಕೇಳನು ರಾವಣೇಶ್ವರ ಮದದಿ
ನಾಳೆಗಳು ಕಳೆದುವು ಕಾಲ ಉರುಳಿದುವು

## ಭೂಮಿಕಾ

ಬಯಸಿದುದೆಲ್ಲ ನಿರ್ನಾಮವಾಗುತಿರಲು
ರಾವಣ ತೇಲಿಸಿದನಾಗ ನೀರೊಳು ಪೆಟ್ಟಿಗೆಯ
ಕಳೆದುದು ಕಾಲಗತಿ ನೂರ್ಕಾಲ ನೂಂಕುತ
ಬೆಳೆಯಿತೊಂದು ಮಗು ಭಸ್ಮದಲಿ ಮಿನುಮಿನುಗಿ

ಉಳುಮೆಯಲಿ ದೊರಕಿತು ಜನಕರಾಜನಿಗೆ
ಶಿಶು ಶ್ರೀಮಂತಿನಿಗೆ ಹೆಸರಿಟ್ಟ 'ಸೀತಾ' ಎಂದು
ಕೂಸು ಜನಕನರಮನೆಯಲ್ಲಿ ಸುಖವಾಗಿ ಬೆಳೆದಳು
ಸತಿ ನೆನೆದಳೀಗ ಜನ್ಮವೃತ್ತಾಂತದ ಕತೆಯ

ಒಳಗೊಂದು ದನಿ ಎಚ್ಚರಿಪುದು ಜಾನಕಿಯ
ಇಹನೆಲ್ಲೊ ರಾವಣನು ಜನ್ಮಕಂಟಕನಾಗಿ
ಬಹು ವಿಧದಿ ಕಾಡಿದಾತನಿಗೆ ಮರಣ ಬಂದಿಲ್ಲ
ಹತನಾಗುವನು ರಾಮನಿಂದವನು ವಿಧಿ ನಿಯಮವಿದು

ಜಾನಕಿಯು ನೆನೆದೊಮ್ಮೆ ಭೀತಳಾಗುವಳು
ಕನಸೆಂದು ಮರೆತದನು ವನಿತೆ ರಾಮನೊಡೆ
ಸುಖಿಸುತಲಿ ಸಖಿ ನಡೆದಿರ್ದಳಾಗ
ಹಸನ್ಮುಖಳಾಗಿ ಭೀತಿಯನು ತೊರೆದಿಂತು

ಕಳೆದರು ಕೆಲಕಾಲ ಗುಹ ಸುಮಂತ್ರರೊಡನೆ
ಕಳೆದ ದಿನಗಳರಿವಿಲ್ಲದೆ ಮೂವರು
ಹಿಡಿದ ಕೆಲಸಗಳ ಮರೆಯದಿರೆಂದೆಚ್ಚರಿಸಿದಳು ಸತಿ
ಕಡೆವರೆಗು ಕೈಪಿಡಿದವನ ಹಿಂದೆ ನಿಂತು

ಒಡನೆ ಶ್ರೀರಾಮ ಗುಹ ಸುಮಂತ್ರರಿಂದ ಬೀಳ್ಗೊಂಡು
ನಡೆದರು ಗಂಗಾತಟವಂ ಬಿಟ್ಟು ಮೂವರು
ಏರಿದರು ಏರಿಗಳನೇರಿ ಇಳಿದರು ಸಡಗರದಿ
ನಾರಿ ಬಳಲಿದಳು ಬಳಲಿ ಬೆಂಡಾದಳು ಭಾಮಿನಿ

ಕೋಡುಗಲ್ಲು ಶಿಖರವನೇರಿ ಮತ್ತಿಳಿದು
ನಡೆದರು ಬಯಲು ದಾರಿಗಳಲಿ ಮುಂದೆ
ಕೊರಕಲಲಿ ಇಳಿದು ಕಣಿವೆಗಳ ಹಾದು
ಊರು ಹಳ್ಳಿ ಗ್ರಾಮಗಳ ದಾಟಿ ನಡೆದರು

ಸುಡುಬಿಸಿಲು ಮಳೆಗಾಳಿಗಳ ಲೆಕ್ಕಿಸದೆ
ನಡೆದರು ನಡುನಡುವೆ ದಣಿವಾರಿಸಿಕೊಳ್ಳುತ
ಇಡುತ ಹೆಜ್ಜೆ ಸತಿ ದಣಿದು ಮೆದುವಾಗಲು
ಪಿಡಿದು ರಮಣನ ಕೈ ನಡೆವಳು ಸತಿ ಮುಂದೆ

ಬಳಲಿದವು ಸತಿಯ ಸುಕೋಮಲ ಕಾಯ
ಬಳಲಿತದು ಬಿಸಿಲ ಬೇಗೆಗೆ ಬೆಂದು
ಒಸರಿತು ಪಾದಪದ್ಮಗಳಲಿ ರಕ್ತಚಿಲ್ಲನೆ
ಉಸುರದೆ ಒಡನಾಡಿಗೆ, ನೋವ ನುಂಗುವಳು ಸತಿ

ನೋಡುವನು ಸೌಮಿತ್ರಿ ತಾಯ ಬೇನೆಯನು
ನೋಡುತಲಿ ಪಾದದಿಂ ಒಸರುತಿರ್ಪ ರಕ್ತವನು
ತಡೆಯದಲೆ ಪೊದ್ದ ಶಲ್ಯದಿಂ ಒರಸುವನು
ನುಡಿವನು ಯುಕ್ತಾಯುಕ್ತವನರಿತ ಲಕ್ಷ್ಮಣನು

ಭಕ್ತಿ ಭಾವದೊಲುಮೆಯಲಿ ತಾಯ್ಗೆ ಮಣಿದು
ಆಪ್ತತೆಯಿಂದುಪಚರಿಸುವನು ಸೌಮಿತ್ರಿ
ಮಾತೆ ಸೀತೆಗೆ ಶರಣಾಗುತ ಲಕ್ಷ್ಮಣ
ಪ್ರೀತಿಯಿಂದುಪಚರಿಸುತ ಸೇವೆ ಮಾಡುವನು

ಕಾಡು ಹೂಗಳ ಕಿತ್ತು ಮಾಲೆ ಮಾಡುವಳು ಸತಿ
ಹಾಡೊಂದ ಗುನುಗುತ ಮಾಲೆ ಹಾಕುವಳು ಪತಿಗೆ
ನೋಡುತ ಸುತ್ತಮುತ್ತಿನ ಸೊಬಗನು ಅವಳು
ಹಾಡೊಂದ ಹಾಡುವಳು ಉಲ್ಲಾಸ ಸಿಗಲೆಂದು

ಮುಂದೊಂದು ದಿನ ಚಂದದಿ ಬಂದರು
ಅಂದದ ನೆಲೆಗೆ ಅಪೂರ್ವ ಸನ್ನಿಧಿಗೆ
ಎಲ್ಲಿ ನೋಡಿದರಲ್ಲಿ ಬಣ್ಣ ಬಣ್ಣದ ಹೂಗಳು,
ನೆಲ್ಲಿ ಕಾಯಿ ಸುರಹೊನ್ನೆ ಮರಗಿಡಗಳು

ಅಂಬರದಲಿ ಚೆಲ್ಲಿಹ ಬಿಳಿ ಮೋಡಗಳ ಹಿಂಡು
ಕಾಂಬರು ಗಗನದೆತ್ತರಕೆ ಕಣ್ಣೋಟ ಹರಸಿ
ಚಿತ್ರಕೂಟ ಪರ್ವತವದೆಂದು ತಿಳಿಯಲು
ಚಿತ್ರ ವಿಚಿತ್ರ ಪಕ್ಷಿಗಳ ಕಂಡು ಬೆರಗುವಡೆದು

ಕಾಂಬರು ಗೋವು ಗೋವಳಿಗರ ಹಿಂಡು
ಸಂಭ್ರಾಂತರಾಗಿ ಹಸಿರುಪಚ್ಚೆಯ ಹಾದು
ಬಂದರು ಋಷಿಪುಂಗವರ ನೆಲೆಗೆ
ಭಾರದ್ವಾಜ ಆಶ್ರಮಕೆ ಬಂದು ತಂಗಿದರು

ನಿಂತರಲ್ಲಿ ಉಸಿರೊಳಗೆ ಭಾವವನಿಳಿಸಿ
ಕಂತುಪಿತನ ನೆನೆದಲ್ಲಿ ನಿಂತರು ಕೆಲಕಾಲ
'ಭಾರದ್ವಾಜ ಮುನಿಗಳು ನೆಲೆಸಿಹರಿಲ್ಲಿ' ಎನಲು
ತಂಗಿದರಲ್ಲಿ ಚಿತ್ರಕೂಟ ಪರ್ವತದಲ್ಲಿ

ಇಂತಿರಲೊಂದು ದಿನ ಬಂದನಲ್ಲಿಗೆ ಭರತ
ಎಂತಿರುವರು ಬಾಂಧವರೆನುತ ಸೋದರ
ಬಂದ ಭರತನ ಕಣ್ಣುಗಳು ತುಂಬಿರಲು
'ಕಂದ ನೀನೀಕೆ ಬಂದೆ ಇಲ್ಲಿಗೆ' ಎನುತ ಸೀತೆ

ಸಂತೈಸುತಲವನ ಕೇಳಿದಳು ಮಾತೆ
ಪರಿವಾರದ ಕುಶಲವಂ ಭರತನೊಳು
ಬಿರಿದರಳಿದ ಕಣ್ಗಳಲ್ಲಿಹ ತಾಪವಂ ಕಂಡು
ಪರಿಪರಿಯಲಿ ಅವನ ಸಂತೈಸುತ ತಾಯಿ

ಅಡಿಗಡಿಗು ಅವನ ನೋಡುತ ಭೀತಿಗೊಂಡು
ನೋಡಿದಳು ಪ್ರಾಣಕಾಂತನ ಕಡೆಗೆ ದೇವಿ
ನೋಡುತಿರ್ದನು ಶ್ರೀರಾಮ ಅಂಬರದ ಕಡೆಗೆ
ಕಾಡುತಿಹುದು ನೋವು ಭಾವಿಸಿದಳು ಸತಿ

ಹೇಳಿದಳು ಸತಿ ತಾನೆ ಮುಂದಾಗಿ ಭರತನಿಗೆ
ಪೇಳಿದಳು ಶ್ರೀರಾಮನ ಸೋದರನಿಗೆ ಭಾಮಿನಿ
'ಕಡೆಗಣಿಸಬೇಡ ಕುವರ ನಮ್ಮವರನಲ್ಲಿ
ನಡೆ ನೀನೀಗ ನಮ್ಮೀರ್ವರ ಹರಕೆ ಹೊತ್ತು'

'ಮರೆಯದಿರು ಬಂಧು, ನಿನ್ನ ಕಲ್ಯಾಣವಿಹುದಲ್ಲಿ
ಕರೆ ಕಳಿಸದೆ ನೀನೇಕೆ ಬಂದೆ ಇಲ್ಲಿಗೆ
ಹೊರಡು ಮಗನೆ ಮೋಹ ಪಾಶವಾಗಬಾರದಲ್ಲ
ಬರುವೆವು ನಾವು ಅವಧಿ ಕಳೆದೊಡನೆ ನಿಮ್ಮ ಬಳಿಗೆ'

ಸರ್ವಗುಣ ಸಂಪನ್ನೆ ಸೀತೆ ಮಹಾಮಾತೆ
ಸರ್ವರೊಳು ಸಮಭಾವದಿ ಮೆರೆದವಳು
ಭರತನನ್ನೊಲುಮೆಯಿಂದ ಸಂತೈಸುತಲಿ
ಮರೆಯದಂತೆ ಕುಲಬಾಂಧವರ ಹರಿಸಿದಳು

ಹರಸಿದಳು ಶ್ರೀದೇವಿ ಭರತನನು ಹಸನ್ಮುಖಿದಿ
ಭರತ ನುಡಿದನು ರಾಮನೊಡೆ ಖತಿಗೊಂಡು
ನುಡಿದನು ಭರತ 'ದಶರಥನ ಸುತ
ಕಡೆಗಾಲದಲಿ ಪಿತನ ಬಳಿ ನೀನಿಲ್ಲ ಪ್ರಭು'

'ಮರಣಿಸಿದನು ತಂದೆ ನಿಮ್ಮ ನೆನಪಲ್ಲಿ
ಇರವ ತಿಳಿಯದೆ ನಾವು ಸೊರಗಿದೆವು
ಕರ್ಮ ವಿಧಿಗಳ ಮುಗಿಸಿ ನಾನಿತ್ತ ಹುಡುಕುತ ಬಂದೆ
ಧರ್ಮ ಕಾರ್ಯವ ನಡೆಸು ಪಿತನ ಹೆಸರಲ್ಲಿ'

ಗಂಗೆಯಲಿ ಮುಳುಗಿ ತರ್ಪಣವ ಬಿಟ್ಟು
ಶ್ರೀರಾಮ ಲಕ್ಷ್ಮಣರು ಬಂದರು ಭರತನ ಬಳಿಗೆ
'ಅಣ್ಣ ಶ್ರೀರಾಮ ಲಕ್ಷ್ಮಣರೆ ಚಿಕ್ಕವನು ನಾನು
ಚಿಣ್ಣನ ಮೇಲೇರಿಸಿ ಕೂಡಿಸುವುದು ಸರಿಯೆ?'

'ಬನ್ನಿರಿ ಅರಮನೆಗೆ ನಿಮ್ಮಾಣೆ ಹೊಣೆ ನಿಮ್ಮದು
ಬಂದೆನದಕಾಗಿ ನಿಮ್ಮ ಒಪ್ಪಿಸುವ ಸಲುವಾಗಿ'
ಭರತ ಅಂಗಲಾಚುತ ಶ್ರೀರಾಮನ ಮುಂದೆ ನಿಂತು
'ಸರಿ ಹೊತ್ತು ಸರಿದಿಹುದು ಈಗಲಾದರು ಬನ್ನಿ'ರೆಂದ

'ಕಾಲ ಬರುವುದು ಭರತ ನೀನೀಗ ಹೊರಡು
ಕೋಶಲಾಧಿಪತಿ ನಾನೆ ಮುಂದೆ
ಕೈಕೆಯ ನಿಂದಿಸದಿರು ಅವಳೆಮ್ಮ ಮಾತೆ ಮರೆಯದಿರು
ಪಿತೃ ವಾಕ್ಯಕೆ ತಲೆಬಾಗಬೇಕು ನಾವೆಲ್ಲ'

'ಇರಲಿ ನಿನ್ನಾಶೀರ್ವಾದ ಇಡು ಪಾದುಕೆಗಳ
ಶಿರದಲ್ಲಿ ಹೊತ್ತು ನಡೆವೆನು ಬಂದಂತೆ ಹಿಂದೆ
ಪಾದುಕೆಗಳ ಆರಾಧಿಸುತ ಹೊಣೆಹೊತ್ತು ನಡೆವೆನು
ಧರ್ಮ ನಿಷ್ಠೆಯ ಬಿಡೆನು ಇದು ಸತ್ಯ' ಎಂದನಾ ಭರತ

ಹೊತ್ತು ನಡೆದನು ಪಾದುಕೆಗಳ ಭರತ
ಹೊತ್ತು ಕಂತುವ ಮೊದಲು ಹೊತ್ತು ನಡೆದನು
ಇಟ್ಟನು ನಂದಿಗ್ರಾಮದಲಿ ಪಾದುಕೆಗಳ
ಇಟ್ಟು ನಡೆದನು ಧರ್ಮ ನಿಷ್ಠೆಯಲಿ

'ಭರತನ ನೆನೆಪು ಮಾಸಲೊಲ್ಲದು ಪ್ರಭು ನಮಗೆ
ಹೊರಡೋಣ ನಾವಿಲ್ಲಿಂದ ಮರೆತೇವು ಭರತನ'
ಸತಿ ನುಡಿಯಲಿಂತು ಪತಿಯೊಡನೆ ಕನಲುತ
ಪತಿ ಪ್ರಿಯವಾಗಿ ಆಲಂಗಿಸುತಲವಳ ನುಡಿದ

'ನಡೆ ಈಗಲೆ ಅತ್ರಿಮುನಿ ಆಶ್ರಮಕೆ' ಎಂದನಾ ರಾಮ
ನಡೆದರಲ್ಲಿಂದ ಮೂವರು ಅತ್ರಿಮುನಿಗಳ ನೆಲೆಗೆ
ಅರಿತು ಅತ್ರಿಮುನಿ ಅನಸೂಯೆ ಜಗದಾದಿವಂದ್ಯೆ
ಹಿರಿಹಿರಿ ಹಿಗ್ಗುತ ಹಿರಿ ಮುತ್ತೈದೆ ಬನ್ನಿರೆಂದಳು

ನೋಡಿದಳು ಸೀತೆ ಮಹಾ ಪತಿವ್ರತೆಯನು
ನೋಡುತಲಿ ಬಾಗಿದಳು ಅವಳ ಪದತಲಕೆ
ಹಿಡಿದೆತ್ತಿ ಸೀತೆಯ ನೆತ್ತಿಯನಾಘ್ರಾಣಿಸಿ ಸತಿ -
ಅನಸೂಯೆ ಕರಕೊಂಡಳು ಆಶ್ರಮದೊಳಗೆ

ಅನನ್ಯ ಭಾವದಿ ಕುಳ್ಳಿರಿಸಿ ಸೀತಾರಾಮ ಲಕ್ಷ್ಮಣರ
ಬಿಸಜನಾಭನ ನೆನೆದು ಅನುಸೂಯೆ ಭಕ್ತಿಭಾವದಿ
ಬೆಳಗಿದಳು ಮನೆತುಂಬ ದೀಪಧೂಪಗಳ
ಇಳೆಯಲಿ ಅವಳೊಬ್ಬ ಅತಿಮಾನುಷಳು

ತ್ರಿಮೂರ್ತಿಗಳನಾಡಿಸಿ ಮೊಲೆಯೂಡಿಸಿದ ತಾಯಿ
ದತ್ತಮೂರ್ತಿಗೆ ಜನ್ಮವಿತ್ತ ಮಹಾಸತಿ
ಸೀತೆಯೊಡನೆ ಕುಳಿತು ಕೇಳಿದಳು ಸ್ವಯಂವರದ
ಕತೆಯ - ಸತಿ ಸೀತೆ ವಧುವಾದ ಪರಿಯ

ರನ್ನ ಹೊನ್ನಿನ ಕಾಂತಿ ವದನಾರವಿಂದದಲಿ
ಚೆನ್ನದಂತೆ ಹೊಳೆವ ದಂತ ಪಂಕ್ತಿಯ ಸಾಲು
ಮುಡಿಗೇರಿಸಿಹಳು ಕಾಡುಮಲ್ಲಿಗೆ ಮಾಲೆ
ಮಡದಿಗನತಿ ದೂರದಲಿ ಕುಳಿತಿರ್ದನಾ ಅತ್ರಿ

ಉಪಚರಿಸಿದಳು ಸತಿಪತಿಗಳ ಅನಸೂಯೆ
ಅಪರಿಮಿತವಾದ ಆನಂದದಲಿ ಅಂಗನೆ
ನುಡಿದಳು ಧರ್ಮಶಾಸ್ತ್ರಗಳಂ ತಿರುವಿ
ನಡೆನುಡಿಗಳೆಂತಿರಬೇಕು ನಾರಿಗೆ ಕುಲನಾರಿಗೆ

'ಆದರ್ಶ ಸತಿಯರ ಪತಿವ್ರತೆಯರೆನ್ನುವರು
ಪತಿಯನಲ್ಲದೆ ಅನ್ಯರ ನೆನೆಯರಿವರೆಂದು
ಪರಪುರುಷರನೆಂದಿಗೂ ಕಣ್ಣೆತ್ತಿ ನೋಡದವರು
ಪರಪುರುಷರವರಿಗೆ ಬ್ರಹ್ಮಾದಿ ದೇವತೆಗಳು'

'ಪತಿವ್ರತೆಯರ ಸಾಲಿನಲಿ ನೀನಿರುವೆ
ಸತಿಗನುರೂಪನಾದ ಪತಿ ನಿನಗಿರಲು
ಗತಿಯುಂಟು ಸದ್ಗತಿಯುಂಟು ಸಂಸಾರದಲಿ
ಮತಿವಂತಳು ನೀನೆಂಬುದ ನಾ ಬಲ್ಲೆ ದೇವಿ'

ಅಗರು ಕಸ್ತೂರಿ ಗಂಧ ಪರಿಮಳವನಿತ್ತು
ಉಡಿಯ ತುಂಬಿದಳು ಅನಸೂಯೆ ಸಡಗರದಿ
ನಮಿಸಿದಳು ಸೀತೆ ಮಾತೆ ಮಹಾಸತಿಗೆ
ನಮಿಸಿ ಹರಕೆಯ ಪಡೆದು ಹೊತ್ತು ನಡೆದಳಾ ದೇವಿ ||

## ಅರಣ್ಯಾಭಿಮುಖವಾಗಿ

ನೆನಪುಗಳು ಕಾಡುವುದು ಶ್ರೀರಾಮಚಂದ್ರನಿಗೆ
ಮನದಲಿ ಮರುಗುವನು ಪ್ರಭು ಖಿನ್ನನಾಗಿ
ನೆನೆವನು ತಾಯಿ ಕೌಸಲ್ಯೆಯನು ನಿರತ
ನೆನೆವನು ಪ್ರಭು ಅನುಜರೆಲ್ಲರ ಮನದಿ

ಕೌಸಲ್ಯೆ ಸುಮಿತ್ರೆ ಕೈಕೆಯರ ನೆನೆದು
ಕುಶಲವನರಿಯದೆ ಪ್ರಭು ಕಳವಳಿಸುವನು
ಕ್ಷಣಕ್ಷಣಕು ಪರಿತಪಿಸುತ ಶ್ರೀರಾಮಚಂದ್ರ
ಕಣ್ಣೀರ ಹೊಳೆಯನ್ನು ಹರಿಸುವನು ಇಂತು

ಅರಿತಳು ದೇವಿ ಪ್ರಿಯಕರನ ವ್ಯಾಕುಲವನು
ಪರಿಪರಿಯಲಿ ಅವನ ಸಂತೈಸುತ
ರಮಿಸುವಳು ಶ್ರೀಕಾಂತನಿಗೊಲಿದ ಸತಿ
ಕಾಮಿನಿಯು ಪ್ರೇಮದಿಂ ತನ್ನ ಶ್ರೀಕರನ

ನಡೆವರು ಕಾಡುದಾರಿಯ ತುಳಿಯುತ
ಇಡುವ ಹೆಜ್ಜೆಯಲಡಿಗಡಿಗು ಕಾಣುವರು
ಕರಡಿ ಶಾರ್ದೂಲ ವಿಧವಿಧದ ಮೃಗಗಳ
ಕರ ಪಿಡಿದು ಪತಿಯ ಸತಿ ಹೇಳುವಳು

'ಕಾಡಿನಲಿ ಕಾರಿರುಳು ತುಂಬಿಹುದು
ಗೂಬೆ ಗೂ.. ಗೂ.. ಎನ್ನುತಿಹುದು
ಶುಭಲಕ್ಷಣವಿದಲ್ಲ ದೊರೆಯೇ ನಾ ಬಲ್ಲೆ
ಫಲಾಫಲಾಗಳನರಿತು ನಡೆಯಿರಿ' ಎಂದಳಾ ದೇವಿ

'ಬಿಡು ಭಯವ ಭಾಮೆ ಏಕಿಂಥ ವಿಹ್ವಲತೆ?
ನಡೆ ದೇವಿ ನಾನಿಹೆನು ನಿನ್ನ ಕಾಪಿಡಲು
ಬಿಡು ನಿನ್ನ ಭಯ ಜಾನಕಿ ಶ್ರೀರಾಮನಿಹನು'
ಪ್ರಭು ನಿರ್ಭಯದಿ ನಡೆಸಿದನವಳ

ಬಂದೆರಗಿದನಾಗಲೇ ವಿರಾಧ ಅತಿಭಯಂಕರ
ಇಂದಿರೆ ಬೆರ್ಚಿದಳು ಕಂಡವನ ಭಯದಿ
ತಬ್ಬಿಕೊಂಡಳು ಲತೆಯಂತೆ ರಾಘವನ
ಕೊಬ್ಬಿ ಮದದಲಿ ವಿರಾಧನು ಬಂದ ಸತಿಯ ಬಳಿಗೆ

ಎತ್ತಿ ಕಂಕುಳಲಿ ಇರುಕಿ ಸೀತೆಯ ವಿರಾಧ
ನಿತ್ಯ ಸುಮಂಗಲೆ ಸತಿ ತಾಳಿಭಾಗ್ಯವ ನೆನೆದಳು
ಇಳಿಸಿದನು ವಿರಾಧ ಭೂಮಿತೂಕದ ಭಾರವನು
ಇಳಿಸಿದನು ಅವನೆತ್ತಿಕೊಳ್ಳಲಾರದೆ ಸತಿಯ

ಹೆದೆ ಏರಿಸಿದ ಬಾಣವನು ಬಿಟ್ಟ ಶ್ರೀರಾಮ
ವಿರಾಧನೆದೆಗೆ ಗುರಿ ಇಟ್ಟು ಬಾಣಗಳನು
ಒಂದರ ಹಿಂದೊಂದು ಬಾಣಗಳ ಸಾಲುಸಾಲು
ವಿರಾಧ ಉರುಳುತ ದಿವ್ಯಪ್ರಭೆಯಲಿ ಮಿಂಚಲು

ಅರಿತ ಶ್ರೀರಾಮ ವಿರಾಧನೋರ್ವ ಗಂಧರ್ವನೆಂದು
ಅರುಹಿದ ಸತಿ ಸೀತೆ ಲಕ್ಷ್ಮಣರಿಗೆ ಶಾಪವದೆಂದು
ವಿರಾಧ ಭಕ್ತಿಭಾವದಿ ನಮಿಸೆ ರಾಘವಗೆ
ಹರಸಿದ ಶ್ರೀರಾಮಚಂದ್ರ ವಿಷ್ಣುಲೋಕ ಪ್ರಾಪ್ತವಾಗಲೆಂದು

ಮುನ್ನಡೆದು ಶರಭಂಗರ ಆಶ್ರಮ ತಲುಪಿದರು
ಬನ್ನಿರೆಂದಾದರಿಸುತ ಮುನಿಗಳು ಪೇಳಿದರು
'ಕೊಡುತಿಹರು ರಕ್ಕಸರು ಕಿರುಕುಳವ ಯಜ್ಞಕೆ
ಬಿಡದೆ ನೀನವರ ಸದೆ ಬಡೆಯಲು ನೆರವಾಗೆಂ' ದರು

ನುಡಿದನು ಶ್ರೀರಾಮಚಂದ್ರ 'ಮುನಿವರ್ಯರೇ ನಾ
ಬಂದಿಹೆನು ಉಳಿಯಲೊಂದು ನಿವಾಸವ ಹುಡುಕುತ
ನಿಮ್ಮ ದಯೆಯಿಂದ ಕರುಣಿಸಿರಿ ಆ ನೆಲೆಯ'
ಎನಲು ರಾಘವನು ಶರಭಂಗರೊಡನೆ

'ಸುತೀಕ್ಷ್ಣನೆಂಬ ಯತಿಯೋರ್ವನಿಹನು ಕಾನನದಿ
ನೇಮ ನಿಷ್ಠೆಯಲಿ ಅತಿ ಪ್ರತೀತನು ಅವನು
ನೀವು ಕಾಣಿರಿ ವಾಸಕನುಕೂಲ ಕಲ್ಪಿಸುವನು
ನೀವೀಗಲೆ ಹೊರಡಿರಿಲ್ಲಿಂದ ಕಾಣಿರಿ ಯತಿಯನು'

ನದಿ ನದಗಳ ದಾಟಿ ಬಂದರು ಮೂವರು
ನಿಂದು ಸುತೀಕ್ಷ್ಣರ ಸನ್ನಿಧಿಯಲಿ ಶ್ರೀರಾಮ
ಬಂದವನು 'ಶ್ರೀರಾಮ ಚಂದ್ರ'ನೆಂದರುಹಿದ
ಎದ್ದು ಮುನಿಪುಂಗವರು ಆಲಿಂಗಿಸಿದರಾಗ

ಧರ್ಮ ಅರ್ಥ ಮೋಕ್ಷಗಳನರಿತು
ನಿಮ್ಮ ಕಾರ್ಯದಲಿ ಮುನ್ನುಗ್ಗಲು ಜಯವಿಹುದು
ಯತಿವರರು ನುಡಿದರಿಂತು ಶ್ರೀರಾಮಚಂದ್ರನಿಗೆ
'ಮತಿವಂತ ಶ್ರೀರಾಮ ಧರ್ಮ ಬಿಟ್ಟವನಲ್ಲ'

ತಿಳಿದವನು ತೀಕ್ಷ್ಣಮತಿಯು ಸುತೀಕ್ಷ್ಣರಿಗೆ ಮಣಿದ
ಕಳುಹಿಸಿದರು ಯತಿಗಳವರ ಅಗಸ್ತ್ಯಾಶ್ರಮಕೆ
ಕಂಡರು ಅಗಸ್ತ್ಯರು ಸೀತೆಯನು ದಿವ್ಯದೃಷ್ಟಿಯಲಿ
ಕಂಡರು ಮಂಗಳಾಂಗಿಯ ದಿವ್ಯಪ್ರಭೆಯ

ಶುಭ್ರನೀಲಮಣಿ ನೇತ್ರದ, ಲತಾಂಗಿಯ
ಪ್ರಭೆಯಿಂದರಳಿದ ಮುಖಕಮಲವ
ನೋಡಿದರು ಮುನಿಪುಂಗವರು ವನಜಾಕ್ಷಿಯ
ನೋಡಿದರು ಶ್ರೀದೇವಿ ಸಹಿತ ಬಂದ ಶ್ರೀರಾಮನ

'ಶುಭವಾಗಲಿ ನಿಮಗೆಲ್ಲ ಎಂದಸ್ತ್ರವನಿತ್ತರು'
ಶುಭಕಾಮನೆಗಳನು ಬಯಸಿ ಮುನಿವರರು
'ಪಂಚವಟಿ ಇಹುದಿಲ್ಲಿಂದ ಹರಿದಾರಿದೂರ
ಪಂಚವಟಿಯು ನಿಮ್ಮ ಕಾರ್ಯಕ್ಷೇತ್ರವಾಗಿಹುದು'

'ಹೋಗಿ ನೀವಲ್ಲಿಗೆ ನಿಮ್ಮ ಕರ್ತವ್ಯ ಹಿರಿದಿಹುದು
ಯೋಗಿ ಭೋಗಿಗಳಿಹರಲ್ಲಿ ನಡೆಯಿರಿ ನೀವಲ್ಲಿಗೆ
ಸಾಗಿ ಬಂದ ದಾರಿಯನ್ನೊಮ್ಮೆ ತಿರುಗಿ ನೋಡಿದೊಡೆ
ಮುಂದಿನ ಮಾರ್ಗ ನಿಮಗತಿ ಸುಲಭ'ವೆಂದರು

ಪ್ರಾತಃಕಾಲದೊಳೆದ್ದು ಶ್ರೀರಾಮಚಂದ್ರರು
ನಡೆದರಲ್ಲಿಂದ ಪಂಚವಟಿಗಭಿಮುಖವಾಗಿ
ಇಡುತ ಹೆಜ್ಜೆಯೊಂದೊಂದು ಬಂದ ಸತಿಯ ಕಂಡು
ನುಡಿದ ಶ್ರೀರಾಮಚಂದ್ರ ಬಹುದೂರ ಕ್ರಮಿಸಿದೆವು ಎಂದು

'ಬಳಲಿರುವೆ ನೀ ಎನ್ನ ವರಿಸಿ ಸಿರಿದೇವಿ
ಹೇಳು ನಿನಗಿದು ಸೊಗವೆ ಈ ಪರಿಯ ಬದುಕು
ನಿಜದಿ ಅರುಹು ಎನ್ನೊಳು, ನಾ ಪಡೆನು ಬೇಸರವ
ನಿಜದಿ ಅರುಹು ದೇವಿ ಎನಗುಂಟು ನಿನ್ನೊಳು ಅತಿ ಪ್ರೀತಿ'

ನುಡಿದ ರಾಘವ ಸತ್ಯ ಸಂಧ ಗುಣವಂತ
ನುಡಿದನು ಮಡದಿ ಒಡೆಯ ಪೇಳೆಂದು
ಸರಸಿಜಾಕ್ಷನ ಸತಿ ಜಾನಕಿದೇವಿ
ಸರಸದಿಂದಲಿ ನುಡಿದಳಿಂತು ಪತಿಯ ಮಾತಿಗೆ

'ಇರಬಹುದೆ ಸತಿ ಪತಿಗತಿ ದೂರ
ರಮಣ? ನಾ ನಿನ್ನ ಸತಿ, ಪತಿಯ ಅರ್ಧಾಂಗಿ
ಕಷ್ಟಸುಖಗಳಲಿ ಸಮಭಾಗಿ ಎಂಬುದ
ಮರೆಯದಿರು ರಾಘವನೆ ಗುಣವಂತನೆ'

ಸತ್ಯ ಸಂಧನೆ ಮಹಾಭಾಗನೆ ಲಕ್ಷ್ಮಣಾಗ್ರಜನೆ
ನಿತ್ಯ ನೇಮದಿ ನಿನ್ನ ಅನುಸರಿಸುತಿಹೆ ನಾನು
ಕಾಮ ಕ್ರೋಧಾದಿ ವ್ಯಸನಗಳ ತೊರೆದವನೆ
ಮಾನವಂತನೆ ಮಾನಿನಿಯ ಅನುಗ್ರಹಿಸು

ಕೊಲ್ಲದಿರು ನಿರಪರಾಧಿಗಳ ಕುಲವಂತರ
ಕೊಲ್ಲದಿರು ಶಾಸ್ತ್ರ ಧರ್ಮವನರಿತು ನಡೆವರ
ಅಹಿಂಸಾವ್ರತವನು ಅನುಸರಿಸು ಶ್ರೀಕಾಂತ
ಮಹಿಪತಿಯ ಅನುಗ್ರಹ ನಿನಗಿಹುದು

ಸತಿ ಧರ್ಮವನು ಬೋಧಿಸಿದಳಾ ರಾಘವನಿಗೆ
ಪತಿಗುತ್ತಮ ಮರ್ಮಗಳ ಅರುಹಿದಳು
ಸೀತೆ ಹದಿಬದೆಯ ಧರ್ಮ ತಿಳಿದವಳು
ಸತಿ ಪತಿಗಳ ನೇಮ ಒಂದಾದೊಡೆ ಶ್ರೀಪತಿಗೆ ಪ್ರೀತಿ

'ಕುಲದ ಹಿರಿಮೆಯನೆತ್ತಿ ಹಿಡಿದೆ ನೀ
ಕುಲಸತಿ, ನೀ ಧನ್ಯೆ ವೈದೇಹಿ
ಕ್ಷತ್ರಿಯರ ಕುಲಧರ್ಮ ಕ್ಷಾತ್ರ ತೇಜವ ಮೆರೆಸುವುದು
ಕೃತಿಯಲಿ ಕಠಿಣತಮವು ಕ್ಷಾತ್ರ ತೇಜದ ನಿಲುವು'

'ರಕ್ಕಸರಿಹರು ಅರಣ್ಯದಲಿ ಬಹುಮಂದಿ
ಇಕ್ಕುವೆನು ನಾನವರಿಗೆ ಮತ್ತೊಂದು ಪುಟ್ಟಿ ಬರದಂತೆ
ಕಟ್ಟುವೆನು ಅವರನ್ನು ಹೆಡೆ ಮುರಿ ಬಿಗಿದು ಮೆಟ್ಟಿ
ಹುಟ್ಟಡಗಿಸುವೆ ನಾನವರ ದೇವಿ'

ಅಗಸ್ತ್ಯಾಶ್ರಮವು ಬರಲು ಲಕ್ಷ್ಮಣ
ಸಡಗರದಿ ನಡೆದ ಶಿಷ್ಯೋತ್ತಮನ ಬಳಿಗೆ
ನುಡಿದ ಅವನೊಡೆ 'ಬಂದಿಹರು ಸೀತಾ ರಾಮಚಂದ್ರರೆಂದು
ಅರುಹು ಮುನಿ ಪುಂಗವರಿಗೆ' ನಲು ಲಕ್ಷ್ಮಣ

ಶಿಷ್ಯೋತ್ತಮ ನಡೆದು ಒಳಗಡಿಯಿಡುತ
ವಿಷಯವರುಹಿದ ಸಾಷ್ಟಾಂಗವೆರಗುತ ಮುನಿಗೆ
ಕೇಳಿ ಮುನಿಪುಂಗವ ಪುಳಕಿತಗೊಳ್ಳುತಲಿ
ಹೇಳಿದನು ಶಿಷ್ಯನೊಡೆ 'ಬಹುಕಾಲದ ಬಯಕೆ ಇದೆಂ'ದು

'ಕರೆದು ತಾರೆ'ಂದು ನುಡಿಯಲು ಮುನಿ
ರುದ್ರಾವತಾರಿಗಳವರು ಕರೆದಿಹರು ನಿಮ್ಮನು
ಬರಬೇಕು ಬರಬೇಕು' ಎನುತ ಶಿಷ್ಯ
ಬರಮಾಡಿಕೊಂಡ ಆದರದಿ ಶ್ರೀರಾಮಚಂದ್ರರ

ಅಂದದ ಆನಂದವನ ತುಂಬಿ ನಿಂತ ಕೆರೆಗಳ
ಚಂದದಿ ನಲಿವ ಚಿಗರೆಗಳ ನೋಡುತ
ನಡೆದರು ಶಿಷ್ಯನೊಡನೆ ಶ್ರೀ ರಾಮಚಂದ್ರರು
ಕಂಡರಲ್ಲಿ ಹದಿನೇಳು ದೇವತೆಗಳ ವಾಸಸ್ಥಳಗಳ

ಸೂರ್ಯ ತೇಜದಿ ಹೊಳೆವ ಮುನಿಗಳ
ಕಾರ್ಯಕಾರಣ ಸಿದ್ಧಿಪಡೆದ ತೇಜೋರೂಪವ
ಕಂಡು ಶ್ರೀ ರಾಮಚಂದ್ರರು ಧನ್ಯರಾಗುತಲಿ
'ನಮೋ ನಮೋ' ಎಂದೆರಗಿದರು ಶ್ರೀ ಚರಣಕೆ

ಹೋಮ ಹವನಗಳ ಮಾಡಿ ಮುನಿಗಳು
ವಿಧಿವತ್ತಾದ ಶಾಸ್ತ್ರಗಳೆಲ್ಲವಂ ಪೂರೈಸಿ
ನೇಮದಿಂದಿರ್ದ ದಂಪತಿಗಳಿಗುಣಬಡಿಸಿ
ವೈಷ್ಣವ ಧನುಸ್ಸನು ಶ್ರೀ ರಾಮನಿಗರ್ಪಿಸಿದನಾ ಮುನಿ

ಮತ್ತೆ ಶ್ರೀ ರಾಮಚಂದ್ರರ ಮುನಿ ಆದರಿಸುತ
ಇತ್ತು ಉಳಿದೆಲ್ಲ ಅಸ್ತ್ರಗಳನವರಿಗೆ ಹರಸಿದ
'ಮಂಗಳವಾಗಲಿ ಶುಭವಾಗಲಿ ನಿಮಗೆ
ಭಂಗವಿಲ್ಲದೆ ಕಳೆಯಲಿ ನಿಮ್ಮೀ ವನವಾಸವೆಂದು'

'ನಡೆಯಿರಿ ನೀವಿನ್ನು ಎರಡು ಯೋಜನವಿಹುದು
ಪಂಚವಟಿಗೆ, ಇಹುವಲ್ಲಿ ಕಂದ ಫಲಮೂಲಗಳು
ಕಟ್ಟಿರಲ್ಲಿ ಪರ್ಣಕುಟಿಯನು ನೆಲೆಸಿ ನೀವಲ್ಲಿ
ತೊಟ್ಟ ಪ್ರತಿಜ್ಞೆ ನೆನಪಿರಲಿ ಶಿಷ್ಟರ ಉದ್ಧರಿಸಿ'

ಕಳುಹಿಸಲು ಅವರ ಹೀಗೆಂದು ಮುನಿ ಪಂಚವಟಿಗೆ
ಬತ್ತಳಿಕೆಗಳ ಬೆನ್ನಿಗೇರಿಸಿ ಸೋದರರು
ನಡೆದರಲ್ಲಿಂದ ಪಂಚವಟಿಗಭಿಮುಖವಾಗಿ
ನಡೆದು ಬಸವಳಿದು ಬವಣೆಗೊಂಡರು

ಮಾರ್ಗ ಮಧ್ಯದಲೊಂದು ಗೃಧ್ರ ಎದುರಾಗಲು
ಯಶೋವಂತನು ಕೇಳಿದನು 'ನೀನಾರೆ'ಂದು
ವಿಷಯವರುಹುತ ಗೃಧ್ರ 'ನಿನ್ನ ಹಿತಚಿಂತಕ'
ಕಶ್ಯಪನ ವಂಶಜನೆಂದು ಅರುಹಿತು ತನ್ನ ಪ್ರವರ

'ಸಂಪಾತಿಯ ಅನುಜನು ನಾನು ಜಟಾಯು' ಎಂದಿಂತು
ಇಂಪಾದ ಧ್ವನಿಯಿಂ ಪೇಳಲಿದು
ಶ್ರೀಕಾಂತೆಯ ಕಡೆಗೊಮ್ಮೆ ನೋಡಿದನು ಶ್ರೀರಾಮ
ಅನುಗ್ರಹಿಸು ಶ್ರೀರಾಮ ಸರಿಹೊತ್ತಿನಲಿ ರಕ್ಷಿಪೆನು ಸತಿಯ

ಜಟಾಯುವಿನ ಜೊತೆಗೆ ನಡೆಯುತಾ ಮೂವರು
ಪಂಚವಟಿಯತ್ತ ಪಯಣ ಬೆಳೆಸಿದರು
'ಯಾವ ಮಾಯೆಯೋ ದೇವಲೀಲೆಯೋ
ಕಾಯುತಿಹುದು ಎಮ್ಮನು' ಎಂದಳು ಸತಿ

ಬಂದರು ಪಂಚವಟಿಗೆ ವನ್ಯ ಜೀವಿಗಳಿಹ ತಾಣಕೆ
ನಿಂದಲ್ಲಿ ಶ್ರೀರಾಮ ನಾಲ್ಕು ಕಡೆ ದೃಷ್ಟಿ ಹರಿಸಿ
ಪೇಳಿದನು ತನ್ನನುಜಗೆ 'ಅರಣ್ಯ ವಿಜ್ಞಾನದಲಿ ನಿಪುಣನಿಹೆ ನೀ
ಹೇಳು ಸುಖತಾಣವೆಲ್ಲಿಹುದೊ ಕಟ್ಟಲ್ಲಿ ಪರ್ಣಕುಟಿ'

'ನೋಟಕ್ಕೆ ನಿಲುಕುವಂತಿರಬೇಕು ವನ ಜಲಚರಗಳು
ಮಾಟವಾಗಿರಬೇಕು ನೆಲ ನೋಟಕಾನಂದ ತರಬೇಕು
ಅನುಭವಿಸಬೇಕು ನಾವಲ್ಲಿ ಸುಖಸಂಪದವ
ಆನಂದವಿರಲದು ನಮಗದು ಶ್ರೇಯಸ್ಸು'

'ನಿತ್ಯ ನೈಮಿಕ ಕರ್ಮಗಳಿಗನುಕೂಲವಿರಬೇಕು
ತತ್ವ ಚಿಂತನೆಗನುಕೂಲಕರ ತಾಣವಾಗಿರಬೇಕು
ನಿತ್ಯ ಸತ್ಯದ ಚಿಂತನೆಗೆ ಅವಕಾಶ ಸಿಗುವಂತಿರಬೇಕು
ಅಂಥದೊಂದು ಸ್ಥಳವಾರಿಸಿ ಕಟ್ಟಲ್ಲಿ ಪರ್ಣಕುಟಿ'

'ನಿನ್ನ ಸಾನ್ನಿಧ್ಯವೆನಗೆ ಸುಖವಹುದು ಅಗ್ರಜನೆ
ನಿನಗಿಂತ ನಾ ಮಿಗಿಲೆ ಪ್ರಭು? ತರವಲ್ಲವಿದು
ನಿನ್ನಾಜ್ಞೆ ಶಿರಸಾ ವಹಿಸಿ ನಡೆಸುವೆ ದಾಸಾನುದಾಸ ನಾನು
ಆಜ್ಞಾಪಿಸೆನಗೆ ಇಂಥ ನೆಲೆ ಸರಿಯಿಹುದೆಂದು

'ಕಟ್ಟುವೆನಲ್ಲಿ ಪರ್ಣಕುಟಿ ನಿಮ್ಮಿಚ್ಛೆಗನುಸಾರ
ಕಟ್ಟುವೆ ನಾನಲ್ಲಿ ಮಾತೆಗತಿ ಪ್ರಿಯವಾಗಿ
ಇಟ್ಟು ಮರ ಮುಟ್ಟುಗಳ ಕಟ್ಟುವೆ ಪರ್ಣಕುಟಿ
ಶ್ರೀಧರನ ಕೃಪೆ ನನಗಿರಲಿ' ಎಂದನಾ ಲಕ್ಷ್ಮಣ ||

## ಪಂಚವಟಿಯಲ್ಲಿ

ಇದ್ದರು ಸಂತಸದಿ ಸೀತಾರಾಮ ಲಕ್ಷ್ಮಣರು
ಸದ್ದಿಲ್ಲದಂತಿರ್ದರು ಸಂಪ್ರೀತರಾಗಿ ಸಂತಸದಿ
ಗೋದಾವರಿ ನದಿಯ ತಟದಲ್ಲಿ ನಿರ್ಮಿಸಿದ ಪರ್ಣಕುಟಿಯಲಿ
ನಿರತ ನಿರ್ಮಲ ಚಿತ್ತದಿಂದಿರ್ದರು ಅವರಲ್ಲಿ

ಹೇಮಂತ ಋತುವಿನ ಹಿಮಪಾತದಲಿ
ಮಿಂದುಬರುವರು ಗೋದಾವರಿ ನದಿಯಲಿ
ಕೊರೆವ ಕುಳಿರ್ಗಾಳಿ ಬೆರ್ಚುವಂತಿರಲು
ಎಣ್ಣೆಕಾಣದ ಕೂದಲು ಜಡೆಗಂಟಾಗಿಹುದು

ಹಂಸ ತೂಲಿಕಾ ತಲ್ಪದಲಿ ಮಲಗಬೇಕಾದವರು
ರಾಜಭೋಗಾದಿಗಳನತ್ತ ನೂಂಕಿದರು
ಕಾನನದಿ ದರಿದ್ರರಂತಿಹರು ಸೋದರರು?
ಏನು ಪುಣ್ಯವೋ ಏನು ಕರ್ಮವೋ ವಿಧಿಚಿತ್ತವು

ಹೀಗಿರಲೊಂದು ದಿನ ಬಂದಳಲ್ಲಿಗೆ ಶೂರ್ಪನಖಿ
ಮಾರ್ಗ ಮಧ್ಯದಿ ನಿಂದಿಹ ಲಕ್ಷ್ಮಣನ ಕಂಡು
ಶೂರ್ಪನಖಿ 'ತನಗವನೆ ಪತಿ' ಯೆಂದುಕೊಳ್ಳುತಾ
ಮೂಢಮತಿ ನುಡಿದಳು ಲಕ್ಷ್ಮಣನೊಡನೆ

'ನನಗೆ ನೀನೇ ಪತಿ ಚೆಲುವ ಚನ್ನಿಗರಾಯ
ನಿನ್ನಂಥ ಚೆಲುವನ ಕಂಡಿಲ್ಲ ಮೂಲೋಕದೊಳಗೆ
ಲಂಕೇಶ್ವರನ ತಂಗಿ ನಾ ಶೂರ್ಪನಖಿ
ಒಪ್ಪಿಕೊಳ್ಳೆನ್ನ ಚೆಲುವನೆ' ಎಂದಳಾ ರಕ್ಕಸಿ

'ದುಷ್ಟಳೇ ದೂರ ನಿಲ್ಲೆಂ'ದ ಲಕ್ಷ್ಮಣ
ದೃಷ್ಟಿ ನೆಟ್ಟು ನಿಂತ ರಕ್ಕಸಿಯ ಸನಿಹ ಈ ಪರಿ
ಹೇಳಿದರೆ ಕೇಳಲೊಲ್ಲಳು ಅತಿ ವಿನಯ ತೋರ್ವಳು
ಬಳಿಸಾರಿ ಬರುವಳು ಶೂರ್ಪನಖಿ ಭರದಿ

ಹೇಸಿದ ಲಕ್ಷ್ಮಣ ಅವಳ ವಿರೂಪವಂ ಕಂಡು
ಕಸಿವಿಸಿಗೊಂಡು ಅತ್ತಸರಿದ
ದೂರ ನಿಲ್ಲೆಂದ ಶ್ರೀರಾಮನನುಜ
ಬರಿಮಾತಿಂದ ಜಗ್ಗಲೊಲ್ಲಳೆಂದು ಲಕ್ಷ್ಮಣ

ಕಿವಿಮೂಗ ಕತ್ತರಿಸಿ ಲಕ್ಷ್ಮಣನು
ಇಟ್ಟನವಳ ಕೈಗೆ ಅಟ್ಟಿದನು ಬಹುದೂರ
ಬಂದಳು ಶೂರ್ಪನಖಿ ಸೋದರ ಖರನ ಬಳಿಗೆ
ನಿಂದವನ ಮುಂದೆ ದೂರಿದಳು ಲಕ್ಷ್ಮಣನ

'ಅಣ್ಣ ನಿನ್ನ ಬಿಟ್ಟರೆ ಎನಗಾರುಂಟು ಪೇಳು
ಅಣ್ಣ ಲಂಕೇಶ್ವರನಿಗರುಹಲು ಚಿಕ್ಕ ವಿಷಯವಿದು
ನೀನೆ ಸರಿ ಲಕ್ಷ್ಮಣನ ತರಿದು ಬಾ'ರೆಂದು ನುಡಿದಳು
ಸತಿ ಸೀತೆ ಲಂಕೇಶ್ವರನಿಗೆ ತಕ್ಕವಳೆಂದರುಹಿದಳು

ಖರ ಸಿಡಿದು ಸಿಂಹವಾದನು
ಮೊರೆಹೊಕ್ಕ ಶೂರ್ಪನಖಿಯ ಕಂಡು
ಬಿಡೆನು ನಾನವನ ತರಿದು ತಂದೊಪ್ಪಿಸುವೆ
ಹದ್ದು ಕಾಗೆಗಳಿಗುಣಬಡಿಸು ಹೆಣವನೆಂದ

ಖರದೂಷಣರು ಯುದ್ಧಹೂಡಿದರು
ಎರಗಿದರು ರಾಮಲಕ್ಷ್ಮಣರ ಮೇಲೆ
ಹದಿನಾಲ್ಕು ಸಹಸ್ರ ಸೇನೆಗಳು ಸುತ್ತುವರೆದವು
ರಾಮಲಕ್ಷ್ಮಣರ ಹತ್ತಿಕ್ಕಲಾರದೆ ಹೊರಳಿದವು

ಯುದ್ಧದಲಿ ಮಡಿದ ದೂಷಣನ ಕಂಡು
ಖರಕ್ರೋಧದಲಿ ಕಟಕಟನೆ ಹಲ್ಲುಕಡಿದ
'ಬಿಡೆನು ಇವರನ್ನು' ಎಂದೆನುತ ಖರನು
ಬಡಿದಾಡಲು ಬಿಟ್ಟ ತ್ರಿಶಿರನ ರಾಮನೊಡನೆ

ಇದಿರುಂಟೆ ರಾಮನಿಗೆ ಶಸ್ತ್ರಪರಿಣತನು
ಎದಿರುನಿಂತವರುಂಟೆ ಶ್ರೀರಾಮನಿಗೆ
ತ್ರಿಶಿರನು ಗತಿಸಿದನು ಯುದ್ಧದಲಿ
ಮೂರು ತಲೆಗಳ ಹೊತ್ತವನು

ನೋಡಿ ಎದೆಯೊಡೆಯಿತು ಖರನಿಗೆ
ಇನ್ನು ಬಿಡಲುಂಟೆ ಇವರನ್ನು ಎಂದೆನುತ
ಬಿಟ್ಟನು ಖರ ಬಾಣಗಳ ಸುರಿಮಳೆಯ
ರಾಮನೊಂದುಚಣ ಬೆರಗುವಡೆದ

ನಿಂತ ರಾಮನು ಅಭಿಮಂತ್ರಿಸಿ ಎಸೆದ
ಇಂದ್ರನಿತ್ತ ಬಾಣವನು ಖರನ ಎದೆಗೆ
ಬಂದೆರಿಗಿತು ಬಾಣ ಖರನ ಕೊಂದಿತು
ಧರೆಗೆ ಬಿದ್ದನು ಖರನು ಯುದ್ಧಮುಗಿಯಿತು

ವಿಷಯವರುಹಿದರು ಗೂಢಚರರು
ಲಂಕೇಶ್ವರ ರಾವಣನಿಗೊಡನೆ
ಶಂಕೆಯಲಿ ನಡೆದ ಲಂಕೇಶ ರಥದೊಡನೆ
ಬಂದ ಮಾರೀಚ ನಾಶ್ರಮಕೆ

ತಾಟಕಿಯ ಮಗ ಮಾರೀಚನಿಗೆ ಮಣಿದು
ಅಟ್ಟಹಾಸದಿಂ ಲಂಕೇಶ್ವರ ನುಡಿದನಿಂತು
ರಾಮ ಬಂದಿಹನಂತೆ ರಕ್ಕಸರ ಮೆಟ್ಟಿಕ್ಕಲು
ಉಪಾಯವೊಂದುಂಟು ನನ್ನಲ್ಲಿ ನಿನ್ನುಪಕಾರ ವಿರಲಿ

ಬಿಡು ನಿನ್ನ ಕ್ರೋಧವನು ಒಳಿತಲ್ಲವಿದು
ನಡೆ ನಿನ್ನ ದಾರಿಯ ಪಿಡಿದು ಒಡನೆ
ಬಡಿದಾಡುವುದರಿಂದ ಸುಖವಿಲ್ಲ ಯಾರಿಗೂ
ಶ್ರೀರಾಮ ಅಂತಿಂಥವನಲ್ಲ ಎಂದ ಮಾರೀಚ

ಶೂರ್ಪನಖಿ ಬಂದು ನಿಂದಿಸಲು ರಾವಣನ
ಸಭಿಕರ ಮುಂದೆ ನಿರ್ಭಯದಿ ನಿಂದು
ಮರಳಿದನು ರಾವಣ ಮಾರೀಚನ ಬಳಿಗೆ
ಪರಿಪರಿಯಲಿ ಪೇಳುತ ಒಪ್ಪಿಸಿದನವನ

ಮಾಯಾವಿದ್ಯೆಯಲಿ ನಿಪುಣನಿಹೆನು
ಕಾಯುವೆನು ನಾ ನಿನ್ನ ಅನುಗಾಲ ತಿಳಿದುಕೊ
ಮಾರೀಚ ನೀ ಮಾಯಾಚಿಗರೆಯಾಗು
ಮಾನಿನಿಯು ನಿನ್ನ ಕಂಡು ಕುಣಿಯುವಂತಾಡು

ಮಾರೀಚ ವಿಧಿಯಿಲ್ಲದೆ ಒಪ್ಪಿದನು
ರಾವಣನ ಕಿರಿ ತಂಗಿ ಶೂರ್ಪನಖಿಯ ಗತಿಕಂಡು
ನಡೆದು ಮಾರೀಚ ಕೂಡಲೇ ಪಂಚವಟಿಗೆ
ಚಿಗರೆಯಾದನು ತನ್ನ ನಿಜರೂಪ ಮರೆಸಿ

ಚಿಗರೆ ಚಂಗನೆ ಚಿಮ್ಮಿ ಓಡುವುದ ಕಂಡಳು ಚೆನ್ನೆ
ರಂಗು ರಂಗಿನ ಬಣ್ಣ ಬಣ್ಣದ ಚುಕ್ಕಿ ಶೃಂಗಾರ
ಬಂಗಾರದ ಮೈ ಬಣ್ಣ ಮೋಹಕ ಚೆಲುವು
ಚಿನ್ನದ ಮೆರುಗಿನ ಚಿಗರೆ ಬಳಿಸಾರಿಬರಲು

ಹಿಡಿಯ ಹೋದರೆ ಸಿಗಲೊಲ್ಲದು ಲಲನೆಯ ಕೈಗೆ
ನುಡಿದಳು ಒಳಬಂದು ಪ್ರಾಣಕಾಂತಂಗೆ ಸತಿ
ಬಂದಿಣುಕಿ ಶ್ರೀರಾಮ ಚಿಗರೆ ಚಂದವ ಕಂಡು
ಓಡಿದನು ಬೆನ್ನಟ್ಟಿ ಬಿಲ್ಲು ಬತ್ತಳಿಕೆ ಪಿಡಿದು

ಚಿಗರೆ ಓಡುತ ಬೆಟ್ಟಗುಡ್ಡಗಳಿಂದಿಳಿದು
ಚಂಗಚಂಗನೆ ಹಾರುತ ಬೆಟ್ಟಗಳನೇರುತ
ಎರಚುತಲಿ ಕಣ್ಣಿಗೆ ಮಣ್ಣನಾ ಮಾಯಾಮೃಗ
ಗಿರಿಶಿಖರಗಳಲಿ ಓಡುತವನಂ ದೂರ ಒಯ್ಯಲು

ಬಿಲ್ಲಿಗೆ ಬಾಣವಂ ಹೂಡಿ ಮೀಂಟಲಾ
ಬಾಣವಾಕ್ಷಣ ರೊಯ್ಯ ರೊಯ್ಯನೆ ಸಾಗಿ
ಜಿಂಕೆಯ ಹೃದಯವಂ ಭೇದಿಸುತಿರೆ
ಶಂಕಿಸಿದನು ಶ್ರೀ ರಾಮ 'ಮಾಯೆ ಇದೆ'ಂದು

ನೆನೆದಂತೆ ನಿಜರೂಪದಿ ಮಾರೀಚ ಗೋಚರಿಸೆ
ಮನವೆಲ್ಲ ಬರಿದಾಗಿ ಶ್ರೀ ರಾಮ ಬಳಲುತಿರಲು
ಮಾರೀಚ 'ಹಾ! ಸೀತೆ... ಓ.. ಲಕ್ಷ್ಮಣಾ' ಎಂದರಚುತ
ಧ್ವನಿ ಪ್ರತಿಧ್ವನಿಯಾಗಿ ಪಸರಿಸಿತು ಸುತ್ತಲು

ಸೀತೆ ನಡುಗಿದಳು ಭಯಭೀತಳಾಗಿ
ಸತಿ, ಹೋಗೆಂದಳು ಲಕ್ಷಣನ ಕಡೆ ತಿರುಗಿ
ಕೇಡು ಸಂಭವಿಸಿಹುದೆಂದು ಭ್ರಮಿಸಿದಳು
ಕಾಡಿದಳು ಲಕ್ಷ್ಮಣನ ಕಂಡು ಬಾರೆಂದು ರಾಮನ

ಸಾಮಾನ್ಯರಂತಿವಳು ಭೀತಳಾದುದ ಕಂಡು
'ಸಮಾನರಾರಿಹರು ಶ್ರೀ ರಾಮಚಂದ್ರಂಗೆ?
ಬಿಡಿ ಭ್ರಾಂತಿ ತಾಯಿ ಇದು ರಕ್ಕಸರ ತಂತ್ರವೆಂದಾ
ಲಕ್ಷ್ಮಣನಂ ಮತ್ತೆ ಕಾಡಿದಳು ಸತಿ 'ಹೋಗಿ ಬಾರೆ'ಂದು

ಹೋಗದಿರಲು ಲಕ್ಷ್ಮಣನು ಪರಿಪರಿಯಲಿ ಬೇಡಿಕೊಂಡಳು
ಹೋಗು ಹೋಗೆಂದರು ಕೇಳಲೊಲ್ಲನು ಲಕ್ಷ್ಮಣ
ಕಂಡಳೊಂದುಪಾಯವನು ಸತಿ ಸೀತೆ
ಅವನಾತ್ಮಾಭಿಮಾನವನು ಕುಗ್ಗಿಸುವೆನೆಂದುಕೊಂಡಳಾ ತಾಯಿ

'ಪೋಗಲೊಲ್ಲೆ ನೀನೇಕೆಂದು ನಾ ಬಲ್ಲೆ ಲಕ್ಷ್ಮಣ
ಕಾಲಗತಿ ಕೆಟ್ಟಿಹುದು ನಿನ್ನ ಕಣ್ಣು ನನ್ನ ಮೇಲಿಹುದು
ಹಿಂಗಿ ಹೋಗಲಿ ನಿನ್ನ ಕಣ್ಣುಗಳೆರಡು
ಭಂಗ ತರದಿರು ನೀ ಎನಗೆ' ಂದಳಾ ಸತಿ

'ಸೋಜಿಗವಿದು! ತಾಯಿ ನುಡಿಯ ಬಹುದೆ ನೀವಿಂತು
ನಿಜದ ದಾರಿಯನ್ನು ಬಿಟ್ಟು ನಡೆಯುವವ ನಾನಲ್ಲ
ನೀವಾಡಬಹುದೆ ತಾಯಿ ಇಂಥ ಮಾತುಗಳ?
ನನ್ನಣ್ಣ ಶ್ರೀ ರಾಮಚಂದ್ರನ ಮೇಲಾಣೆ ನಿಮ್ಮ ರಕ್ಷಣೆಗಾಗಿ ಇಹೆನಿಲ್ಲಿ'

ಮೌನವಹಿಸಿದಳಾ ದೇವಿ ಮಾತಿಲ್ಲದಲೆ
ಮೌನದಲಿ 'ಶಿವನೆ ಏಕಿಂಥ ಮಾತ ನುಡಿಸಿದೆ
ದೀನನಿವನು ಅಣ್ಣನಿಗೆ ಅತಿವಿನಯನು
ಮೂಲೋಕ ಮೆಚ್ಚುತಿಹುದಿಂದು ಇವನ ಸೌಶೀಲ್ಯಕೆ'

'ಇಂತು ಅಲಕ್ಷಿಸಬಹುದೆ ತಾನಿಂದು ಇವನ'
ಸಂತಾಪದಲಿ ಸೀತೆ ತನ್ನೊಳಗೆ ತಾ ನೋವನುಂಗಿ
ಹೃದಯದಲಿ ಅವನ ಶೀಲವನಾರಾಧಿಸುತ
ಹೃದಯೇಶ್ವರನಲಿ ಮೊರೆಯಿಟ್ಟಳಾದೇವಿ

'ನುಡಿ ಇದನು ಕೇಳಿ ನೊಂದು ನಡೆದನು ಲಕ್ಷ್ಮಣ
ಅಡಿಯಿಡುವ ಮೊದಲು ವಿಧಿಗೆ ಮಣಿದು
ವಿಧಿಸಿದನು ಲಕ್ಷ್ಮಣ ರೇಖೆಯೊಂದನೆಳೆದು
ವಿಧಿ ಬರೆದ ಬರಹವಿದು ದಾಟದಿರಿ ಇದನು'

'ಹೊರ ಬಂದರೆ ಹೊರೆ ಕಷ್ಟವನು ಅನುಭವಿಸುವಿರಿ
ಇರಿ ಇದರೊಳಗೆ ನಾವು ಬರುವವರೆಗೆ
ನಿಮ್ಮ ರಕ್ಷಣೆಗೆ ಎಳೆದಿಹೆನು ಈ ಗೆರೆ ತಾಯಿ
ನನ್ನಣ್ಣ ಶ್ರೀ ರಾಮನ ನೆನೆದು ರಕ್ಷೆಯಾಗಿಟ್ಟಿಹೆನು ಇದನು'

ನುಡಿದಿಂತು ಲಕ್ಷ್ಮಣ ನಡೆದ ಶ್ರೀ ರಾಮನ ಅರಸುತ
ಅಡಿಗಡಿಗು ತಾಯಿ ಸೀತೆಯ ನೆನೆಯುತ
ಹೊರಟ ಲಕ್ಷ್ಮಣ ಕಾಡುದಾರಿಯಲಿ ಬಲುದೂರ
ಎಲ್ಲೆಲ್ಲು ಹುಡುಕಿದರು ಕಾಣಲೊಲ್ಲನು ಶ್ರೀ ರಾಮ

'ರಾಮರಾಮ' ಎಂದೆನುತ ಹೃದಯದಲಿ ರಾಮನಾಮವ ತುಂಬಿ
ರಾಮ ಪ್ರಿಯ ರಾಮ ಸಖ ಲಕ್ಷ್ಮಣ ಹೊರವಂಟ
ಹುಡುಕುತ ಎಲ್ಲೆಲು ಅರಸುತ ಸುತ್ತಮುತ್ತಲೆಲ್ಲ
ಅಲೆದಲೆದು ದಣಿದು ನಿಟ್ಟುಸಿರ ಬಿಡುತ

ವಿಧಿಯಾರ ಬಿಟ್ಟಿಹುದು ನಿಗೂಢವದರ ಪರಿ
ಎನುತವನು ನಿಂದಿಸುತ ಲಕ್ಷ್ಮಣ ನಡೆಯೆ ದೂರ
ಮುಳ್ಳು ಪೊದೆಗಳೆಡೆಯಿಂದಿತ್ತ ಬಂದನೋರ್ವ ಜಟಾಧಾರಿ
ಭಸ್ಮಭೂಷಿತ ಕಾವಿಧಾರಿಯಂ ಸೀತೆ ಕಂಡು

ನಮಿಸಿದಳು ಸತಿ ಶ್ರೀರಾಮನ ರಕ್ಷಿಸೆನುತ
ನಡುಬಾಗಿ ನಿಂತಳಲ್ಲೆ ಸತಿ ರೇಖೆಯೊಳಗೆ
'ಭವತಿ ಭಿಕ್ಷಾಂದೇಹಿ' ಎನಲು ಯತಿಯು
ಸತಿ ಅವನೆಡೆಗೆ ನೋಡುತಲಿ ಕ್ಷಣ ಕಾಲ

ಆತ್ಮಜ್ಞಾನಿ ಮುನಿ ದಿವ್ಯದೃಷ್ಟಿ ಉಳ್ಳವನೆಂದು
ಸತಿ ಒಳ ನಡೆದು ಬಳ್ಳದಲಿ ತುಂಬಿ ತಂದಳು ಅಕ್ಕಿ
ರೇಖೆ ದಾಟದೆ ಸತಿ ಕರೆದಳು ಯತಿಯ ಹತ್ತಿರಕೆ
ಯಕ್ಷಿಣಿಯ ನೆನೆದು ಯತಿ ಕರೆದ ಮಹಾ ಸತಿಯ

ಯಾವ ತಂತ್ರದ ಮೋಡಿಯೋ ಯಾವ ಮಂತ್ರ ಮಾಟವೋ
ರಥವೇರಿದಳು ಜಾನಕಿ ತನಗರಿವಿಲ್ಲದಲೆ
ಚಲಿಸಲು ರಥ ಶರ ವೇಗದಲಿ ಬಿಟ್ಟಳಾಗ ಕಣ್ಣು
ಲಲಿತೆ ಲಾವಣ್ಯವತಿ ಸೀತೆ ಚಿಂತಿಸಿದಳಾಗ

ಮೋಸ ಹೋದ ಪರಿಗೆ ಮರುಗಿ ಮಹಾಸತಿ
ಮಿಸುಕಾಡದೆ ಕುಳಿತಿರಲು ಬೆದರುತಲಿ
ಎದುರಾದನು ರಾವಣನ ರಥಕೆ ಜಟಾಯು
ರೆಕ್ಕೆ ಹಿಗ್ಗಲಿಸಿ ಬಡಿದು ತಡೆಯುಂಟುಮಾಡಿದನವನು

ಕತ್ತರಿಸಿದನು ರಾವಣ ಪಕ್ಷಿಯ ರೆಕ್ಕೆಗಳ ನಿರ್ದಯದಿ
ಕತ್ತು ಹೊರಳಿಸಿ ಬಿದ್ದನು ಜಟಾಯು ಕೆಳಗೆ
ನೆನೆದು ಹಂಬಲಿಸಿದಳು ಸೀತೆ ಶ್ರೀ ರಾಮನ
'ಎನ್ನ ಹೃದಯದ ರಾಮ ಶ್ರೀ ರಾಮ' ಎನುತ

'ನಿನ್ನ ಬಿಟ್ಟರೆ ಅನ್ಯರೆನಗಿಲ್ಲ ಪ್ರಭು
ಎನ್ನ ತಪ್ಪಿನಿಂದಾಗಿಹುದು ಈ ಕೃತ್ಯ
ಎನ್ನ ಮನ್ನಿಸಯ್ಯ ಹೃದಯೇಶ್ವರ' ಎನುತ
ಸತಿ ಬಗೆಬಗೆಯಲಿ ಪ್ರಲಾಪಿಸುತ್ತಿದ್ದಳಾಗ

'ಎನ್ನ ಪಾತಿವ್ರತ್ಯ ನಿಜವಾದುದಾದೊಡೆ
ನೀಚ ರಾವಣನು ಎನ್ನ ಮೈ ಮುಟ್ಟದಿರಲಿ
ಶಿವ ಶಿವ ನಾನೇನ ಮಾಡಿದೆ ಏಕಿಂಥ ಶಿಕ್ಷೆ?
ಕಾವುದೇ ಎನ್ನ ಕೊರಳ ಮಾಂಗಲ್ಯ ಕಾಣಲಾಪುದೆ?'

'ಪ್ರಕೃತಿ ದೇವತೆಯೆ ನೀ ತೋರು ದಯೆ ಎನಗೆ
ಎನ್ನ ರಾಮನು ಬರುವನಿಲ್ಲಿಗೆ ನನ್ನ ಅರಸುತ
ನಿನ್ನ ಕರುಣೆ ನನ್ನ ಮೇಲಿರಲಿ ತೋರವನಿಗೆ ನೀ ದಾರಿ
ನನ್ನ ರಾಮ ಹೃದಯದ ರಾಮ ಶ್ರೀ ರಾಮ'

'ವನಶ್ರೀಗಳೆ ಬರುವನೆನ್ನ ರಾಮನು ನನ್ನ ಅರಸುತಲಿ
ಎನ್ನ ಹೃದಯೇಶ್ವರನು ಈ ದಾರಿಯಲಿ
ತೋರಿರಿ ನೀವವನಿಗೆ ನಾ ನಡೆದ ದಾರಿಯನು
ಕರುಣಿಪನು ಶ್ರೀ ರಾಮ ನಿಮ್ಮನು ಎನ್ನ ಹೃದಯದ ರಾಮ'

'ಪಕ್ಷಿಸಂಕುಲಗಳೇ ಬರುವನು ರಾಮ
ಈ ದಾರಿಯಲಿ ತೋರಿರಿ ನೀವವನಿಗೆ ನಾ ನಡೆದ ದಾರಿ
ಮಾರಜನಕನು ಮುರಾರಿಯು ಎನ್ನ ರಾಮ
ಕಾರುಣ್ಯ ನಿಧಿ ಕರುಣಾಕರ ಶ್ರೀ ರಾಮಚಂದ್ರನಂ ಮರೆಯದಿರಿ'

'ನದಿ ನದಗಳೆ ಬರುವನಿಲ್ಲಿಗೆ ರಾಮ
ಬರಲವನು ಸುಲಭದಿ ಕ್ರಮಿಸಲಿ ದಾರಿ
ಎನ್ನ ರಾಮ ಹೃದಯದ ರಾಮ ಕಾರುಣ್ಯಮಯಿ
ಮಂಗಳಾಂಗನು ಪ್ರಭು ಪುರುಷೋತ್ತಮನು'

'ಶೂರ್ಪನಖಿಯಿಂದ ಬಂದೆರಗಿತ್ತು ವಿಪ್ಪತ್ತು
ಆಗ್ರಹದ ನುಡಿನುಡಿದು ಕಳುಹಿದೆನು ಮೈದುನನ
ತವಸಿ ವೇಷದಿ ಬಂದ ರಾವಣನ ನಾನಾಗ ಅರಿಯದೆ ಪೋದೆ
ನಿಗ್ರಹಿಸುವರು ಶ್ರೀ ರಾಮ ಲಕ್ಷ್ಮಣರು ಕಾಲ ಬಂದಿರಲು'

'ಸತ್ಯವಂತನು ಲಕ್ಷ್ಮಣನು ಉಗ್ರನು ಶಿಕ್ಷಿಪನು
ವಿಧೇಯನಿವನು ಅಣ್ಣನಿಗೆ ಶತ್ರುಗಳಿಗತಿಭಯಂಕರನು
ಶ್ರೀ ರಾಮಚಂದ್ರನಲಿ ಅತಿ ಭಕ್ತಿ ಭ್ರಾತೃವಿಗೆ
ತೋರಿರಿ ದಾರಿ ನೀವವರಿಗೆ ಮುಂದಾಗಿ ನಿಂತು'

ಸೀತೆ ಎತ್ತಿ ಎಸೆದಳಾಭರಣಗಳ ಗಂಟೊಳಗಿಟ್ಟು
ಸತಿ ಎಸೆದಾಭರಣಗಳ ಪಿಡಿದನೋರ್ವ ವಾನರನು
ನೋಡಿದ ಸೀತೆಯನು ಪೊತ್ತೊಯ್ದ ರಥದ ದಿಕ್ಕನು
ನೋಡಿದಳಾ ಸೀತೆ ವಾನರನ ಕಡೆಗೊಮ್ಮೆ ದೀನಳಾಗಿ

ರಥವ ನಡೆಸುತ ರಾವಣನು ಹಲುಬುತಿರ್ದನು
'ಸತಿ ನೀನೆಂಥ ಲಾವಣ್ಯವತಿ' ಎಂದೆನುತ
'ನೋಡಲದು ನಿನ್ನ ನಿತಂಬವದೆಷ್ಟು ಸೊಬಗು?'
ನೋಡಿದೆ ನಿನ್ನ ರೂಪಲಾವಣ್ಯವದು ಎನಗೆ ಮೀಸಲೆಂದ

ರಕ್ಕಸನು ಕುಹಕವಾಡುತ ಸತಿಯ ಕೆಣಕುತ
ಸೊಕ್ಕಿದ ಮಾತುಗಳಲ್ಲವಳ ಇರಿಯುತ್ತ
ನಡೆಸಿರ್ದ ರಥವನು ಲಂಕೆಗಭಿಮುಖವಾಗಿ
ತಡೆಯಿಲ್ಲದ ಮಾತುಗಳಲ್ಲಿ ಅವಳ ಕೆಣಕುತಲಿ ||

## ಅಶೋಕವನದಲ್ಲಿ

ಲಂಕೇಶ್ವರ ಕರೆತಂದನು ಲಂಕೆಗೆ ಸತಿಯನು
ಶಂಕೆ ಇಲ್ಲದಲೆ ಕರೆತಂದನಾ ದುರುಳ ಮಹಾಸತಿಯ
ಬಂದು ರಾವಣನು ಸತಿಗೆ ತೋರ್ದ ತನ್ನಂತಃಪುರವ
'ಒಲಿದು ಬಂದರೆ ನೀ ಪಟ್ಟದರಸಿಯಾಗುವೆ' ಎಂದ

'ಮೋಹಿನಿ ಎನ್ನನಿರಿಯುತಿಹ ಮನ್ಮಥನಿಂ
ಕಾಮಾತುರನಾಗಿಹೆ ದೇವಿ ಎನ್ನ ವರಿಸೆನಲು
ಮಾನಿನಿಯು ಕೊರಳೆತ್ತದೆ ಕುಳಿತಿರ್ದಳು
ಕಾಮಿಸಿಜಪನ ಕಡೆಗಣಿಸುತ ಮಹಾಸತಿ'

'ಇಹರಿಲ್ಲಿ ಮೂವತ್ತೆರಡು ಕೋಟಿ ರಕ್ಕಸರು
ಅವರಿಗಧಿಪತಿ ನಾನಾಗಿರಲು ಎನಗಿಲ್ಲ ಕೊರತೆ'
ಅರಸ ವಿವರಿಸಿದ ಲಂಕಾಧಿಪತ್ಯದ ಮಹಾಸಂಪದವ
'ವರಿಸಿದರೆ ಎನ್ನ ಒಡತಿ ನೀನಾಗುವೆ ಅರಮನೆಗೆ'

ಅಪ್ರತಿಮ ಸುಂದರಿ ಸತಿ ಸೀತೆ ನೆನೆದಳೊಮ್ಮೆ
ಪ್ರಾಣಕಾಂತನ ಸುಜನರ ಪಕ್ಷಪಾತಿಯಲ್ಲದವನ
ಪುರೋಷತ್ತಮನ ನೆನೆದು ಮನದಲ್ಲಿ ಮುದದಿ
ನಿಗ್ರಹಿಸಿದಳು ರಾವಣನ ಮಾತುಗಳ ಸತಿ

ವಿಶಾಲಾಕ್ಷಿಯು ನಿಶ್ಚಲ ಭಾವದಿ ಕುಳಿತಿರಲು
ಶಶಿಕಾಂತನ ನೆನೆದು ಧೈರ್ಯದಲಿ ರಾವಣನು
ಭೂಮಿಜೆಯ ಪಾದಪದ್ಮಂಗಳಲಿ ಹತ್ತು ತಲೆಗಳ ಕೆಡವಿ
'ಶಿವ ಶಿವ ಇವಳೆನ್ನ ಸತಿಯಾಗಲಿ' ಎಂದ

ಇದ ಕೇಳಿ ಸೀತೆ ನುಡಿದಳಿಂತು ರಾವಣಗೆ
'ಮದದಿಂದಾಡುವ ಮಾತುಗಳ ಬದಿಗಿಡು ಒಳಿತಲ್ಲ
ಇಡು ಪ್ರೀತಿ ಪರಮಾತ್ಮನಲಿ ನಡೆಭಕ್ತಿಯಲಿ
ಇಹುದಲ್ಲಿ ಸದ್ಗತಿಯು ನಂಬಿನಡೆ ಲಂಕೇಶ' ಎಂದಳಾ ದೇವಿ

'ಬಲ್ಲೆಯ ಎನ್ನ ರಾಮನು ಅಂತಿಂಥವನಲ್ಲ
ಕೇಳವನ ಮಹಿಮೆ ಅರಿಯದವರಾರುಂಟು ಈ ಜಗದಿ?
ಚಂದ್ರನಂತೆ ಮನಮೋಹಕನು ಶಾಂತ ಚಿತ್ತನು
ಮೂಲೋಕದಿ ಎನ್ನ ನಲ್ಲನಿಗೆ ಸರಿಸಾಟಿ ಯಾರು ಇಲ್ಲ'

'ಪರಸ್ತ್ರೀಯ ಸ್ಪರ್ಶಿಸಿ ಬಲಹೀನನಾದೆ ನೀನೀಗ
ಪರನಿಂದೆ ಮಾಡಿ ಪರಮಾತ್ಮನ ಧಿಕ್ಕರಿಸಿದೆ
ಶ್ರೀರಾಮನ ದೂಷಿಸಿ ದೈವದ್ರೋಹಿಯಾದೆ ಖಳನೆ
ಸರ್ವನಾಶವಿದರಿಂದ ತಿಳಿದುಕೋ' ಎಂದಳಾ ಸತಿ

ಇಟ್ಟರು ಮಹಾಸತಿಯನು ಅಶೋಕವನದಲ್ಲಿ
ಮೆಟ್ಟಿನಿಂತನು ಧರ್ಮವನು ಲಂಕೇಶ ಮದದಿಂದ ಬೀಗಿ
ಭೂಮಿತೂಕದ ಹೆಣ್ಣು ಅವಳು ಭೂದೇವಿಯ ಮಗಳು
ಕಾಮಿಸಿದ ದಶಕಂಠ ಮೃತ್ಯುವ ಹೆಗಲೇರೆ

'ಸೀತೆಯಾದಳು ಭೀತೆ' ಎಂದ ಶ್ರೀರಾಮ
'ಕಷ್ಟಗಳ ಕಂಡವಳಲ್ಲ ವಿಧಿಬರಹವಿದು
ನಿಷ್ಠೆಯಲಿ ನೀನುತ್ತಮನಾಗಿರ್ದೆ ಲಕ್ಷ್ಮಣ
ಹೆದರಿದಳೆಂದು ನೀನವಳ ಸಹಜದಿ ಬಿಟ್ಟುಬಂದೆ'

ಗತಿಸಿದ್ದನ್ನು ನೆನೆದು ಚಿಂತಿಸಲಿದು ಸಮಯವಲ್ಲ
ಸತಿಯೆಲ್ಲಿಹಳೆಂದು ಹುಡುಕ ಹೊರಟವರು ನಾವು
ನೆನೆಯುತಲಿ ಸೀತೆಯನು ಸಹೋದರರು ನಡೆದರು
ನೆನಪುಗಳ ವೃತ್ತದಲಿ ಕುಸಿಯುತ್ತ ಅವರು

ಗುಟುಕು ಪ್ರಾಣದಲಿ ವೃದ್ಧಗೃಧ್ರ ಒಂದು ಬಿದ್ದಿರಲು
ನಡೆಯಲಿಬ್ಬರು ಅದರ ಬಳಿಗೆ ಮೆಲ್ಲನುಸುರಿತು ಅದು
'ಹಿಂದೊಮ್ಮೆ ನಿನ್ನೊಳಂದಿದ್ದೆ ಸಮಯ ಬಂದಾಗ ಉಸುರುವೆನೆಂದು
ಇದೋ ಈ ಹಾದಿಯಲಿ ಮಹಾಸತಿಯ ಹೊತ್ತು ನಡೆದನು ರಾವಣ'

'ಲಂಕೇಶ ಲಂಕಾಧಿಪತಿ ಅವನು ಬಲುಕ್ರೂರನು
ದಶಕಂಠನು ನಡೆದಿಹನು ಈ ಮಾರ್ಗದೊಳು'
ಜಟಾಯು ಶ್ರೀರಾಮನ ಸನ್ನಿಧಿಯೊಳು ನುಡಿದಿಂತು ಪ್ರಾಣಬಿಡಲು
ಅದಕೆ ಸದ್ಗತಿ ಇತ್ತು ಶ್ರೀರಾಮ ನಡೆದನಲ್ಲಿಂದ

ವಿರಹದಲಿ ಶ್ರೀರಾಮ ಪರಿತಾಪ ಪಡುತಲಿ
ಅಸುರನ ಕೊಲ್ಲುವುದರ ಕುರಿತು ಚಿಂತಿಸುತಲಿರ್ದ
'ಸೀತೆ ಎಲ್ಲಿಹಳೋ ಅದೆಷ್ಟು ಬನ್ನಪಡುತಿಹಳೋ' ಎಂದೆನುತ
ಸತಿಯ ಹಿತಚಿಂತನೆಯಲಿ ನಡೆದಿರ್ದ

ನೆನೆದವಳನ್ನು ಪುರುಷೋತ್ತಮ ಜಗದಾದಿವಂದ್ಯ
ಮನದಲಿ ಕೊರಗುತ ನಡೆದ ಅನುಜನೊಡಗೂಡಿ
ಬಗೆ ಬಗೆಯಲಿ ಅವಳನ್ನು ಬಣ್ಣಿಸುತಲಿ
ಸಾಗಿ ಬಂದ ದಿನಗಳ ನೆನೆದು ಮರುಗುತ್ತ ನಡೆದ

'ಸೂರ್ಯದೇವನೆ ಏಕಿಂಥ ತಾಪ ಪ್ರಭು
ಸುಕೃತ್ಯ ದುಷ್ಕೃತ್ಯಗಳನರಿತವ ನೀನು
ಸಾಕ್ಷಿಭೂತನಾಗಿರತಕ್ಕ ಮಹಾಮಹಿಮನೆ
ಅರುಹೆನ್ನ ಪ್ರಾಣೇಶ್ವರಿ ಎಲ್ಲಿಹಳೆಂದು'

'ಸೋದರನೆ ದುಃಖಿಸದಿರೆಂದು ಲಕ್ಷ್ಮಣನು ಸಂತೈಸುತಲಿ
ಧೈರ್ಯಗೆಡದಿರೆಂದು ಪೇಳುತ ಸಖನು
ನಡೆದನು  ಅಣ್ಣನೊಡನೆ ಸತಿಯನರಸುತ್ತ
ಇಡುತ ಹೆಜ್ಜೆಯ ಬರದಿ ನಡೆದರು ಈರ್ವರು

ಇಣುಕುವನು ಶ್ರೀರಾಮ ಮರಗಳೆಡೆಯಲ್ಲಿ
ಇಣುಕುವನು ಗೋದಾವರಿ ತಟದಲಿ ಅಲ್ಲಲ್ಲಿ
ಎಲ್ಲೆಲ್ಲು ಕಾಣದೆ ಅವಳ, ನಡೆದರು ಮುಂದೆ
ನಿಲ್ಲದೆ ನಡೆದರು ಕಾಡುದಾರಿಯ ಸವೆಸುತಲಿ

'ನೋಡಲ್ಲಿ ಲಕ್ಷ್ಮಣ ಪುಷ್ಪಗಳು ಉದುರಿಹುದ
ಮೊಲ್ಲೆಮಲ್ಲಿಗೆ ಇರುವಂತಿಗೆಗಳ ಮುಡಿದಿರ್ದಳಾ ದೇವಿ
ಇಲ್ಲೆಲ್ಲೋ ಮರೆಯಾಗಿಹಳು ಎಲ್ಲೆಂದು ಅರಿಯೆವು
ನಿಲ್ಲಿಲ್ಲಿ ಲಕ್ಷ್ಮಣನೆ ಸಾರುತಿಹುದು ಕಣ್ಣಲ್ಲಿ ಸಾರಂಗವೇನೋ'

'ನೋಡಿಲ್ಲಿ ಸತಿ ಧರಿಸಿದ ಆಭರಣಗಳ ಚಿಕ್ಕ ತುಣುಕು
ನೋಡಿಲ್ಲಿ ಆ ಪುಟ್ಟ ಹೆಜ್ಜೆಯ ಗುರುತು ಬಿದ್ದಿಹುದು
ದೊಡ್ಡ ಹೆಜ್ಜೆಯ ಗುರುತುಗಳು ಇಲ್ಲಿಹವು
ಸೀತೆ ಮರೆಯಾದುದು ಇಲ್ಲೆ ಎಲ್ಲೊ ಎನುವ ಅನುಮಾನ'

'ಎನ್ನ ಅರಗಿಣಿ ಎನ್ನ ಕಣ್ಮಣಿ ಸತಿ ಸೀತೆ
ಎಲ್ಲಿಹಳೊ ನಾನರಿಯದೆ ಪೋದೆನಲ್ಲ
ನಿಲ್ಲಿಲ್ಲಿ ಕ್ಷಣಕಾಲ ಸಿಗಬಹುದೇನೋ ಸುಳಿವು' ಎಂದೆನುತ
ಸೋದರರು ನಿಂತರಲ್ಲಿ ಕ್ಷಣಕಾಲ ಸುತ್ತ ತಿರುಗಿನೋಡುತ್ತ

ನಡೆಯುತ ನಡುರಾತ್ರಿಯೊಳು ಅಣ್ಣತಮ್ಮದಿರು
ಕಡಿದಾದ ದಾರಿಯಲಿ ಕಂಡರು ಕಬಂಧನನ್ನು
ಬಾಹುಗಳ ನೀಡಿ ಬಂಧಿಸಿದ ರಕ್ಕಸನಿವರ
ಬಹುಬಾಧೆ ಹಸಿವಿನಲಿ ಕಂಗೆಟ್ಟಿಹರು

ತರಿಯಲವನ ಭುಜಗಳೆರಡನು ಸೋದರರು
ಅರಿತ ಅವನೀಗ ಶ್ರೀರಾಮಚಂದ್ರ ನಿರಬಹುದೆಂದು
ನುಡಿದ 'ಪ್ರಭು ಸ್ಥೂಲಶಿರಸ ಮುನಿಗಳ ಶಾಪವೆನಗೆ
ಇದ್ದೆ ನಾ ಮೊದಲು ಸುರಸುಂದರಾಂಗನಾಗಿ'

'ಘೋರರೂಪವ ಧರಿಸಿ ನಾನೊಂದುದಿನ ಬರಲು
ಸ್ಥೂಲ ಶಿರಸ ಮುನಿಗಳು ಇತ್ತರೆನಗೆ ಶಾಪ
ಇರು ಹೀಗೆ ನೀನಿದ್ದಂತೆ ಬರುವ ಶ್ರೀರಾಮ ಮುಂದೆ
ಸುಡಲವನು ನಿನ್ನ ದೇಹವನು ಪಡೆಯುವೆ ನೀ ನಿಜಸ್ವರೂಪವ?'

'ನೀನಿರಬಹುದು ಶ್ರೀರಾಮ ಸುಡೆನ್ನ ದೇಹವನು
ನನಗಾಗ ಬರುವುದು ದಿವ್ಯಜ್ಞಾನ
ಸುಲಭದಿ ಅರುಹುವೆನು ಸತಿಯೆಲ್ಲಿಹಳೆಂದು'
ನಮಿಸಿ ಶ್ರೀರಾಮನಿಗೆ ಕಬಂಧ ನುಡಿದನಿಂತು

ಶ್ರೀರಾಮನು ಸುಟ್ಟ ಕಬಂಧನ ದೇಹವನು
ಸಂತುಷ್ಟನಾದ ರಕ್ಕಸನು ದಿವ್ಯರೂಪವಂ ಧರಿಸಿ
ಪೇಳ್ದ ಯಶೋವಂತನಿಗೆ 'ಸುಗ್ರೀವನ ಸಖ್ಯಬೆಳೆಸೆ' ಂದು
ಕೇಳ್ದ ಶ್ರೀರಾಮ ಕೌತುಕದಿ ಅವನೆಂದ ಮಾತುಗಳ

'ದುರ್ದೆಶೆಯಲಿರ್ಪನು ನಿನ್ನಂತೆ ಸುಗ್ರೀವ
ಬೆಳೆಸವನ ಸಖ್ಯವನು ಬಲುಪರಾಕ್ರಮಿಯು
ಭಾವಿಸಿದರೆ ಅವನೊಬ್ಬ ಪ್ರಿಯ ಸಖನಾಗಬಲ್ಲ
ನೋಯಿಸಿದರೆ ಬಾಧಿಪನು ನಿರ್ದಾಕ್ಷಿಣ್ಯದಿಂದ'

'ಬೆಳೆಸುವನ ಸಖ್ಯ ಹುಡುಕುವನು ಸೀತೆಯನು
ನಡೆದಿಹುದು ಸಮರ ವಾಲಿ ಸುಗ್ರೀವರಿಗೆ
ಇಡು ನೀ ಸುಗ್ರೀವನಲಿ ಸ್ನೇಹ ಭಾವ
ಕೊಡುವನು ನಿನಗೆ ಭುಜಬಲವನು ಮರೆಯದಿರು'

'ಪಾತಾಳ ವಿತಲ ರಸತಾಳಗಳಲ್ಲೆಲ್ಲಿರಲಿ ಸೀತೆ
ಅರಸಬಲ್ಲ ಸುಗ್ರೀವ ಇದು ಸತ್ಯ' ಎಂದ ಕಬಂಧ
'ಹೋಗಿ ನೀವಿಲ್ಲಿಂದ ಪಶ್ಚಿಮ ದಿಕ್ಕಿಗೆ
ಸಗ್ಗಸುಖವ ಅನುಭವಿಸುವಿರಿ ಮುಂದೆ'

ಮತಂಗ ಮುನಿಗಳಿಹರಲ್ಲಿ ತಪೋನಿಧಿಗಳು
ಮತ್ತವರ ಆಶೀರ್ವಾದ ನಿಮಗಿರಲಿ
ಕಬಂಧನಿಂತು ನುಡಿದು ಅದೃಶ್ಯನಾಗಲಲ್ಲಿ
ಹೊರಟರೀರ್ವರು ಋಷಿಮೂಲ ಹುಡುಕುತಲಲ್ಲಿ

ಅಲ್ಲೊಂದು ಋಷ್ಯಮೂಕ ಪರ್ವತವು
ಮೇಲೊಂದು ವಿಶಿಷ್ಟತೆಯುಂಟು ಅದಕೆ
ಆಚಾರ ವಿಚಾರ ಸದಾಚಾರಗಳಿಲ್ಲದವರೆಂದು ಹತ್ತರು
ಋಷ್ಯಮೂಕ ಪರ್ವತಕ್ಕೊಂದು ಘನತೆ ಇಹುದು

ಮತಂಗರಿಂದಾಶೀರ್ವಾದ ಪಡೆದು ರಾಮಲಕ್ಷ್ಮಣರು
ಮುನ್ನಡೆದರು ಅಡವಿಯಲಿ ಮುಂದೆ ಮುಂದೆ
ಇದ್ದಳಲ್ಲಿ ಓರ್ವ ಮುದುಕಿ ಶ್ರೀರಾಮಚಂದ್ರನ ಭಕ್ತೆ
ಇದ್ದಳು ಮುದುಕಿ ಅವಳ ಹೆಸರು ಶಬರಿ

ನಡುಕ ಮೈತುಂಬ ಕೋಲು ಕೈಲೊಂದು
ಹುಡುಕುವಳು ಮಧುಮಧುರ ಹಣ್ಣುಗಳ
ಕಚ್ಚಿಬಾಯಲ್ಲಿ ಸಿಹಿ ಹಣ್ಣುಗಳನೆತ್ತಿ ಕೊಳ್ಳಳು
ಅಜ್ಜಿ ಬಹುಪ್ರೀತಿಯಿಂದದನು ರಾಮನಿಗೆಂದು

ಮುಚ್ಚಿಟ್ಟುಕೊಂಡು ಉಡಿಯಲ್ಲಿ ಕಾಯುತಿಹಳು
ಕಚ್ಚಿದೆಂಜಲೆಂದು ಭಾವಿಸಳು ಮುದುಕಿ ಶಬರಿ
ಭಕ್ತಿಭಾವವು ಅಖಂಡವಾಗಿಹುದವಳಲ್ಲಿ
ಶಕ್ತಿಗುಂದಿಹಳು ಮುಪ್ಪಾನ ಮುದುಕಿ ಶಬರಿ

'ಬಂದೆಯ ರಾಮ ಬಂದೆಯ ತಂದೆ' ಎಂದೆನುತ
ಮುದುಕಿ 'ಕಾದಿದ್ದೆ ನಿನಗಾಗಿ ಹಲವರ್ಷಗಳಿಂದ
ಈಗ ಬಂದೆಯಾ ರಾಮ ನಾ ಹೋಗುವ ಕಾಲಕ್ಕೆ'
ಕಚ್ಚಿದ ಹಣ್ಣನು ಉಡಿಯಿಂದ ತೆಗೆದು ಕೊಟ್ಟಳಾ ರಾಮನಿಗೆ

'ರಸ ತುಂಬಿದ ಸಿಹಿಯಾದ ಹಣ್ಣುಗಳು ರಾಮ
ತಿನ್ನು ತಿನ್ನೆನುತ ಶಬರಿ ರಾಮನಿಗುಣ ಬಡಿಸಿದಳು
ನೋಟದಲಿ ಮಾಟ ಮಾಟದಲಿ ನೋಟ ಭಾವುಕಳು ಇವಳು
ಎಂಜಲೆನ್ನುವ ಭಾವ ಮನಸ್ಸಿಗೂ ಬರದು ಮುದುಕಿಗೆ

'ಧನ್ಯಳಾದೆನೊ ರಾಮ ನಿನ್ನ ಕಂಡು
ಇನ್ನೇಕೆ ಈ ನರಜನ್ಮ ಮುಕ್ತಿಯ ನೀಡು ತಂದೆ'
ಎನ್ನುತ ಮುದುಕಿ ಶಬರಿ ಪ್ರಾರ್ಥಿಸಲು
ಸನ್ನುತಾಂಗನು ಮುಕ್ತಿಯನಿತ್ತು ರಕ್ಷಿಸಿದ

ಭಕ್ತಿ ಭಾವದೊಲುಮೆಗೆ ಒಲಿದವನು ಶ್ರೀರಾಮ
ನಿತ್ಯ ನೇಮವ ಬಯಸದ ಮುಕ್ತ ಮನದವನು
ಹಸುಮಗುವಿನಂಥ ಒಡಲಿನವನು ಶ್ರೀರಾಮ
ಶಬರಿಯ ಅಂತರಂಗಕ್ಕೆ ಮಣಿದ ಪ್ರಭು॥



# ಕಿಷ್ಕಿಂಧೆಯಲಿ

ಬಂದರಲ್ಲಿಂದ ಪಂಪಾಸರೋವರಕೆ ಸೋದರರು
ನಿಂದು ನೋಡಿದರು ಸುತ್ತಲ ಸೊಬಗನು
ಎಲ್ಲಿ ನೋಡಿದರಲ್ಲಿ ಪುಷ್ಪಗುಚ್ಛಗಳ ಹೊತ್ತ ಗಿಡಮರಗಳು
ಕಲ್ಲುಗಳಲ್ಲು ಶಿಲ್ಪ ಸೌಂದರ್ಯವರಳಿಹುದಲ್ಲಿ

ವಸಂತ ಋತುಮಾನವು ಪೆಸರ ಸೂಸುತಿದೆ
ಕುಸುರಿ ಕೆಲಸ ನಡೆವಂತೆ ಕಾಣುತಿದೆ ಸೃಷ್ಟಿ
ವೃಷ್ಟಿ ಸುರಿಸುರಿದು ಹಚ್ಚಹಸಿರನುಣಿಸುತಿದೆ
ದೃಷ್ಟಿನೆಟ್ಟಲೆಲ್ಲ ಹೊಸಬಗೆಯ ಸೊಬಗು ಇಣುಕುತಿದೆ

ಬೆಟ್ಟದಿಂದಿಳಿವ ಜಲಧಾರೆಗಳು ಕಣ್ಣ ಕುಕ್ಕುತಿವೆ
ಮಟ್ಟಸವಾದ ಬಯಲು ಸೀಮೆಗಳು ಮುದಕೊಡುತಿವೆ
ಎತ್ತತಿರುಗಿದರು ವಿಧವಿಧದ ಪರಿಮಳ ಮೂಗನರಳಿಸುತಿದೆ
ನಿತ್ಯ ಮಂಗಳೆ ಕೃಷ್ಣಪ್ರಿಯೆ ತುಳಸಿ ಎಲ್ಲೆಲ್ಲು

ಮೂಲೋಕದೊಡೆಯ ಮುನಿಜನ ಪ್ರೇಮಿ
ಸುಂದರ ಮಂದಾರ ಋಷ್ಯಶೃಂಗದ ಕಡೆಗೆ
ಬಂದನು ರಘುವರನು ಸುಗ್ರೀವನಿರುವೆಡೆಗೆ
ಇದ್ದನಲ್ಲಿ ಸುಗ್ರೀವ ವಂದಿಮಾಗಧರೊಡಗೂಡಿ

ಬಂದನಲ್ಲಿಗೆ ವಾಯುಪುತ್ರ ಹನುಮಂತ
ನಿಂದು ರಾಮ ಲಕ್ಷ್ಮಣರ ಮುಂದೆ ಸನ್ಯಾಸಿವೇಷದಲಿ
ನಡುಬಾಗಿ ನಮಿಸುತ ರಾಮನಲಿ ನುಡಿದ
ಇರುವನಿಲ್ಲಿ ವಾನರರಸ ನಾನವನ ಮಂತ್ರಿ

ಬಹು ವಿನಯವಂತ ಹನುಮಂತನ ಕಂಡು
ಚಹರೆಯಲಿ ಸಂದೇಹ ಕಾಣದ ರಾಮ
ಒಲಿದವನ ಸರಳ ಮಾತಿಗೆ
ಬಿಗಿದಪ್ಪಿ ಕೊಳ್ಳುತಲವನ ಪ್ರಭು

ವ್ಯಾಕರಣ ಪಂಡಿತ ಪವನಸುತ
ವೀರಾಧಿವೀರ ಹನುಮನಿಗೆ
ಅಗ್ರ ಪೀಠವನಿತ್ತ ತನ್ನ ಹೃದಯದಲಿ
ಶ್ರೀರಾಮಚಂದ್ರ ಬರಸೆಳೆದವನನಪ್ಪಿಕೊಂಡ

ಎದುರಾದ ಹನುಮನೊಡೆ ಶ್ರೀರಾಮ ನುಡಿದ
'ಪವನಕುಮಾರ ಬಲ್ಲೆ ನಾ ನಿನ್ನ, ಕರೆಸು ಸುಗ್ರೀವನ
ನಾ ಇಕ್ಷ್ವಾಕು ಕುಲದರಸ ದಶರಥನ ಪುತ್ರ
ಕದ್ದೊಯ್ದಿಹರು ರಕ್ಕಸರು ಕಡು ವೈರಿಗಳು ಸೀತೆಯನು'

'ನೀವೆಮಗೆ ಸಹಕಾರ ನೀಡಲು ಬೇಕು
ನಿನ್ನರಸ ಸುಗ್ರೀವ ಛಲದಂಕಮಲ್ಲ
ಕರೆಸವನ ಪವನಸುತ ಶ್ರೀರಾಮಚಂದ್ರ ಬಂದಿಹನೆಂದರಹು
ಮರೆಯದಿರು ಹನುಮ ನಿಮ್ಮ ಸ್ನೇಹವ ಬಯಸುವೆವು'

ನಡೆದನು ಹನುಮ ಸುಗ್ರೀವನಿರುವೆಡೆಗೆ
ನುಡಿದನು ಶ್ರೀರಾಮ ನುಡಿದ ಮಾತುಗಳನೊಪ್ಪಿ
'ಬಯಸಿ ಬಂದವರಿಗೆ ಸಹಕಾರ ನೀಡುವುದು ಧರ್ಮ
ಜಯಿಸಲಿ ಅವರು ನಿನ್ನಣ್ಣ ವಾಲಿಯನು' ಎಂದ ಹನುಮ

ಸುಗ್ರೀವನ ಮನ ಅರಳಿತು ವಾಲಿ ಎಂದೊಡೆ
ಶಂಕೆ ಮನದೊಳಿರಲು ಕೇಳಿದ ಸುಗ್ರೀವ
'ಶತ್ರು ಪಕ್ಷದವನಲ್ಲವೆಂದು ನಂಬುವೆಯಾ ನೀಂ
ಅಲ್ಲವಾದೊಡೆ ಕರೆಸು ಅವನನ್ನು ನನ್ನ ಬಳಿಗೆ'

'ಶತ್ರುಪಕ್ಷದವನಲ್ಲ ಶ್ರೀರಾಮ ಇಕ್ಷ್ವಾಕು ಕುಲದರಸ
ರಾಮಚಂದ್ರನೆಂದವನ ಹೆಸರು ಮುಖನೋಡಿ ತಿಳಿದೆ
ಇಹುದವನ ಮೊಗದಲ್ಲಿ ಸೂರ್ಯತೇಜವು
ಎನಗರಿವಿಲ್ಲದಲೆ ನಾ ಅವನ ಭಕ್ತನಾದೆ ಪ್ರಭು'

'ಚಿನ್ನದ ಪುತ್ಥಳಿಯಂತಿಹನು ದೊರೆ ಶ್ರೀರಾಮ
ದೈವಕಳೆ ತುಂಬಿಹುದು ಮೊಗದಲ್ಲಿ
ದೇವೇಂದ್ರನಂತಿಹನು.ನೋಡಿ, ಬನ್ನಿರೆಂದ
ನುಡಿಸೆ ಭ್ರಮೆ ನೀಗುವುದು ನಿಮಗೆ' ಎಂದನಾ ಹನುಮ

ಸುಗ್ರೀವನ ಆಣತಿಗೆ ಮಣಿದು ಹನುಮ
ಒಳಗೆ ಕರೆತಂದ ಶ್ರೀರಾಮನ - ಸುಗ್ರೀವ ಸ್ವಾಗತಿಸಿದ
ಭ್ರಾತೃಗಳ ಅತಿಸಂಭ್ರಮದಿ - ಸ್ವಾಗತಿಸುತ ಶ್ರೀರಾಮ ಪೇಳ್ದ
ವಾಲಿಯ ಕುರಿತು ನಡೆದ ವಿರಸಗಳನದುಮಿಡದೆ

'ವಾಲಿ ಅಪಹರಿಸಿದನೆನ್ನ ಧರ್ಮಪತ್ನಿಯನು
ಮೂಲೆಗುಂಪಾಗಿಸಿದ ನನ್ನವರಿಂದೆತ್ತಿ ಕಟ್ಟಿ
ಬಿಡೆನು ಆ ಖೂಳನ ನಿಮ್ಮ ಸಹಕಾರವಿರಲು
ಬಿಡೆನು ನಾನವನ ಕೊಲ್ಲುವೆನು' ಎಂದನಾ ಸುಗ್ರೀವ

ಒಮ್ಮತದಿ ಒಪ್ಪಿದರು ಪರಸ್ಪರರು ಸಹಕಾರವೀಯಲು
'ನಿಮ್ಮ ಭಾರ್ಯೆಯನು ನಾ ಕಂಡಿಹೆನೆಂದ ಸುಗ್ರೀವ
ಸತಿ ಆಕಾಶ ಮಾರ್ಗದಿ ಪೋಪುದನು ಕಂಡಿದ್ದೆ
ರಾವಣೇಶ್ವರನು ಒಯ್ದಿಹನು ಲಂಕೆಗೆ' ಎಂದ

'ಮಹಾಸತಿ ಎಸೆದಿಹಳು ನೋಡಿ ಈ ಬಂಗಾರದಾಭರಣಗಳ
ಮಹಾಬಲರೆ ಗುರುತಿಸ ಬಲ್ಲಿರೆ ಇವುಗಳ' ನೆನೆ
'ಗುರುತಿಸಲಾರೆ ನಾ ಎನಲಾ ಶ್ರೀರಾಮ, ನೀ
ಗುರುತಿಸಲಾರದೆ ಪ್ರಭು ನಾ ಹೇಗೆ ಗುರುತಿಸಲಿ' ಎಂದನಾ ಲಕ್ಷ್ಮಣ

'ನಾನರಿಯೆನಣ್ಣ ಅತ್ತಿಗೆಯ ತೋಳ್ಬಳೆಗಳನು
ನಾ ಕಂಡಿಲ್ಲ ತಾಯ ಕರ್ಣ ಕುಂಡಲಗಳನು
ಗುರುತಿಸ ಬಹುದಾದರೆ ಅತ್ತಿಗೆಯ ಕಾಲುಂಗುರಗಳನು ಮಾತ್ರ
ಗುರುತಿಸುವೆ ನಾ ಮಣಿಯುತಿರ್ದ ಅವಳ ಪಾದಪದ್ಮಂಗಳಿಗೆ'

'ಎನಗದರ ಅಗತ್ಯವಿಲ್ಲ ಅವಳು ಸೀತೆ ನಾ ಬಲ್ಲೆ
ಪತಿಯ ನೆನೆದು ಸತಿ ಹಾ ರಾಮ.. ಹಾ ರಾಮ..
ಎನಲು ಅವಳಲ್ಲದೆ ಬೇರಾರಲ್ಲ ಎಂದು ನಾ ತಿಳಿದೆ,
ಬರುವಿರಿ ನೀವಿಲ್ಲಿಗೆಂದು ಅರಿತಿರ್ದಳಾ ತಾಯಿ'

ನುಡಿದಿಂತು ಭೂಪತಿ ಕೊಟ್ಟನಾಭರಣಗಳನು
ನತ್ತು ಮುತ್ತು ಕೊರಳ ಅಡ್ಡಿಕೆ ಕೈಬಳೆಗಳನು
ಎತ್ತಿ ಅದನಿತ್ತ ಶ್ರೀರಾಮನ ಕೈಗೆ ಸುಗ್ರೀವ
ಮತ್ತೆ ವಾಲಿಯರಮನೆಯತ್ತ ನಡೆದರೆಲ್ಲ ಕೂಡಿ

ಹೊರಗಿನಿಂದಲೆ ಸುಗ್ರೀವ ಕರೆದನಾ ವಾಲಿಯ
ಹೊರಬಾರೆಂದು ಪರಿಪರಿಯಲಿ ಕರೆಯಲು
ಬರಲೊಲ್ಲದೆ ಅವನು ಕರೆಯ ಕಡೆಗಣಿಸಿದ
ಹನುಮ ಸಿಡಿದು ಸಿಂಹದ ತೆರದಿ ನುಗ್ಗಿದನಾಗ

ಕ್ರೋಧದಿಂ ವಾಲಿ ಪುಟಿದೆದ್ದು ಹೊರಬಂದ
ಮದದಿಂದ ಮೈಮರೆತಿರ್ದನವನು
ಕದನ ನಡೆಯಲು ವಾಲಿ ಸುಗ್ರೀವರೊಳು
ಸದೆ ಬಡಿದು ಉರುಳಿಸುತ ಒಬ್ಬರನ್ನೊಬ್ಬರು

ನೋಡುತಿರ್ದನಾ ರಾಮ ಮರದೆಡೆಯಲಿ ನಿಂತು
ನೋಡುತಿರ್ದನು ರಾಮ ದಿಗ್ಗಜಗಳ ಯುದ್ಧವ
ನಡೆದ ಹನುಮ ವೀಕ್ಷಕನಾಗಿ
ಕಂಡವನ ಕೆರಳಿದ ವಾಲಿ ಕೆಂಡಕಾರಿದ

ಯುದ್ಧ ನಡೆಯಿತು ಘೋರಯುದ್ಧ
ಸಿದ್ಧಹಸ್ತನು ಯುದ್ಧದಲಿ ವಾಲಿ
ಗೆದ್ದುಕೊಳ್ಳುವೆ ಗದ್ದುಗೆಯನೆಂದುಕೊಂಡ
ವಾಲಿಯ ಕೈ ಮೇಲಾಗುತಿಹುದ ಕಂಡು

ಶ್ರೀರಾಮ ಬಿಟ್ಟನೊಂದು ಬಾಣವನು
ಮರದ ಮರೆಯಲಿ ನಿಂತು ಬಿಟ್ಟ ಬಾಣವು
ಹೃದಯವ ಸೀಳಿ ವಾಲಿ ಕೆಳಗುರುಳಿದನು
ನೋಡಿದ ವಾಲಿ ಶ್ರೀರಾಮನತ್ತ ದೈನ್ಯದಿ

'ಶಿರದಿ ಜಟೆಧರಿಸಿಹನ ಕಾರುಣ್ಯನಿಧಿಯ
ಸರಿಯೆ ಇದು ನಿನಗಿದು ಭೂಷಣವೆ' ಎಂದ
'ಇದಿರು ನಿಲ್ಲದೆ ಬಿಟ್ಟ ಬಾಣವು ನಿಯಮ ಬಾಹಿರವು'
ಎಂದೆನುತ ವಾಲಿ ಭಕ್ತಿಯಲಿ ಮಣಿದ ಶ್ರೀರಾಮನಿಗೆ

'ಸಾವಿಗೊಂದು ನೆವವುಂಟು ವಾಲಿ
ಸಾವು ಬರೆದುದು ನಿನಗೆ ನನ್ನಿಂದ ಹೀಗೆ
ಜನಿಸಿದವನಿಗೊಂದು ದಿನ ಮರಣ ತಪ್ಪದು
ನಿನಗಿಂದು ಎನ್ನಿಂದ ಮೋಕ್ಷಪ್ರಾಪ್ತವಾಗಿಹುದು'

ವಾಲಿ ಗತಿಸುವುದ ಕಂಡು ಸುಗ್ರೀವ
ರಘುಪತಿಯ ಆಲಿಂಗಿಸುತ 'ಹೇ ಸ್ವಾಮಿ
ಎನ್ನೊಳಾನಂದವ ತಂದೆ ವಾಲಿಯ ಕೊಂದು
ಎನಗಿಂದು ಬಂಧುಬಳಗೆಲ್ಲ ನೀನೆ' ಎಂದ

ವಾಲಿ ರುಮೆಯನನುಭವಿಸಿದವನು
ಎನ್ನರಮನೆಯ ಕಸಿದುಕೊಂಡೆನಗೆ
ನೆಲೆಯಿಲ್ಲದಂತೆ ಮಾಡಿದ ಧೂರ್ತ
ಹಗಲಿರುಳು ಹೆದರುತ್ತ ಬದುಕಿದ್ದೆ ತಂದೆ

‘ಇಂದವನ ಭಯ ಎನಗಿಲ್ಲದಂತೆ ಮಾಡಿದೆ
ಬಂಧುಗಳಿದ್ದೇನು ಮಾಡುವರು ಪ್ರಭು?
ಇಂದು ನೀ ನನಗಾದೆ ಮುಂದೆ ನಾ ನಿನಗಾಗುವೆ
ಇದು ಕರ್ತವ್ಯವೆಂದರಿತಹೆ ಎನ್ನೊಡೆಯ’

‘ವಾಲಿ ಮಾಡಿದ ಮೋಸಕ್ಕೆ ಮೋಸವೆ ಮದ್ದು
ಗೆಲ್ಲಲುಂಟೆ ಅವನಿದಿರು ನಿಂತು ಸುಗ್ರೀವ?
ಬಲಭೀಮನವನು ಮದಾಂಧನು ಸಖ
ಇದನು ಮರೆತಿಲ್ಲ ನಾ ಮರಣ ಬರೆದಿತ್ತು ನನ್ನಿಂದ’

‘ವಾಲಿಯ ಮಗ ಅಂಗದನ ರಕ್ಷಿಸು ನೀನು
ವಾಲಿಯ ಏಕಮಾತ್ರ ಪುತ್ರನವನು
ಕಾಲಗರ್ಭದಲಿ ಪಾಪಮಾಡದವರಾರುಂಟು?
ಕಳಕೊಳ್ಳಲು ಪಾಪ ಪುಣ್ಯ ಸಂಚಯವಹುದು’

‘ಅಂಗದನಿಂದ ನಿನಗುಪಕಾರ ಉಂಟು
ನೀನವನಿಗಾಶಯವನ್ನಿತ್ತು ರಕ್ಷಿಸು
ಇಂದವನಿಗೆ ಬೇಕು ನಿನ್ನ ಪ್ರೀತಿಯ ಸಂಗ
ಬಂಧು ನೀನವನಿಗೆ ಮರೆಯದಿರು’ ಎಂದ

ಒಪ್ಪಿಕೊಂಡನು ಸುಗ್ರೀವ ಅಂಗದನ
ಅಪ್ಪಿ ಮುದ್ದಿಡುತ ಅಂಗದನಿಗೆ
ತಪ್ಪುಗಳೆಷ್ಟಿರಲಿ ಕಷ್ಟದಲಿ ಮನ ಕರಗಿದರದು
ಜೀವ ಜೀವಕೆ ಕೊಟ್ಟ ಬೆಲೆಯದು ಎಂದು ನಾ ತಿಳಿಯೆ

ತಾರೆ ದುಃಖಿಸುವುದ ಕಂಡು ಶ್ರೀರಾಮ
ಮರೆಯಬೇಕಮ್ಮ ನೀ ಇದು ಬ್ರಹ್ಮ ಬರಹವೆಂದ
ಸುಖ ಕಷ್ಟಗಳೆಲ್ಲವು ಬ್ರಹ್ಮವಿಧಿಸುವ ಫಲವು
ಮೂಲೋಕವೆಲ್ಲ ಬ್ರಹ್ಮನ ಅಧೀನದಲ್ಲಿಹುದು

'ಬ್ರಹ್ಮ ನಿಯಮವ ಮೀರಿದವರಾರುಂಟು ಈ ಜಗದಲಿ?
ಮುಂದೆ ಅಂಗದನು ಯುವರಾಜನಾಗಲಿರುವನು
ನೀನನುಭವಿಸುವೆ ಸುಖಸಂಪದಗಳ ಮುಂದೆ
ಧೀರ ಯೋಧನ ಪತ್ನಿ ಅಳಲುಂಟೆ ತಾಯಿ?

ಕೆಟ್ಟಕಾಲವು ಕಳೆದು ಪಟ್ಟಾಭಿಷೇಕ ನಡೆದು
ಕಿಷ್ಕಿಂಧಾಪಟ್ಟಣವು ಶೋಭಿಸುತ್ತಿರಲು
ರಾಮಲಕ್ಷ್ಮಣರು ನಡೆದರಲ್ಲಿಂದ ಪ್ರಸ್ರವಣ ಪರ್ವತಕೆ
ಗುಹೆಯೊಂದಿರಲು ಆ ನೆಲೆಯಲ್ಲಿ ನೆಲೆಸಿದರು ಅಲ್ಲೆ

ನೆನೆಯುತಿಹಳಿಲ್ಲಿ ಸೀತೆ ಶ್ರೀರಾಮ ಲಕ್ಷ್ಮಣರ
ಮನೆ ಮಗಳಂತೆ ಕಾಂಬಳವಳನ್ನು ತ್ರಿಜಟೆ
ಲಂಕೇಶನರಮನೆಯ ದಾಸಿ ಅವಳು ಗುಣವಂತೆ
ಸೀತೆಯ ನಿತ್ಯ ಕಾಂಬಳು ಪ್ರೇಮಭಾವದೊಳು

ಬಂದಿಹಳು ಅರಮನೆಗೆ ತ್ರಿಜಟೆ ಅನ್ನವಸ್ತ್ರದಗತಿಗೆ
ಸಂದವಳು ರಾವಣನ ಋಣಕ್ಕೆ ಅವಳು
ರಾವಣನು ಅತಿಧೂರ್ತ ದುರುಳನೆಂದರಿತರೂ
ತ್ರಿಜಟೆಗಿಹುದಲ್ಲೆ ಋಣಭಾರದ ನೆಲೆಯು

ಧ್ಯಾನಮಾಲಿನಿಯ ವಿಷಯ ಹೇಳುವಳು ತ್ರಿಜಟೆ
'ಮಾನಿನಿ ಅವಳು ಪತಿವ್ರತೆಯಾಗಿರ್ದಳಾ ದೇವಿ
ನಿನ್ನಂತೆ ಹೊತ್ತುತಂದ ರಾವಣನು ತನ್ನರಮನೆಗೆ
ಹತ್ತುತಲೆಯ ದಶಕಂಠ ಕೆಡಿಸಿ ಕೂಡಿಸಿದನವಳ'

'ಮರೆತಳು ಸತಿ ಪತಿಯ ತನ್ನ ಕರ್ಮಕೆ ಮರುಗಿ
ಇರಲು ರಾವಣನೊಡೆ ನೆನೆಯಳೆಂದು ಪತಿಯ
ಕೆಟ್ಟಮೇಲೇನುಂಟು ಗರತಿಗೆ ಗೌರವ
ಇಟ್ಟುಕೊಂಡವನ ಕೂಡ ಬಾಳುತ ಮರೆತಳು ಸತಿ'

'ತನು ಒಂದು ಕಡೆ ಮನಸೊಂದು ಕಡೆ ಕೊಡದೆ
ಧಾನ್ಯಮಾಲಿನಿ ರಾವಣನ ಸತಿಯಾದಳಿಂತು
ಮಾನಿನಿಗೆಸಗಿದ ಪಾಪಕರ್ಮಕೆ ಅರಸ
ಅನುಭವಿಸುವನು ತಳೆತಳೆದು ಜನ್ಮ'

ಆಗೊಮ್ಮೆ ಬರುವುದು ಸೀತೆಗೆ ಊರ್ಮಿಳೆಯ ನೆನಪು
'ಬರುವೆನೆಂದಳು ಬಾಲೆ ಬೇಡವೆಂದೆ ನಾ
ಇಂದು ಕಾಡುತಿಹುದೆನ್ನ ಪಾಪಕೂಪವಾಗಿ
ಇದು ನೊಂದ ಊರ್ಮಿಳೆಯ ಶಾಪವಾಗಿರಬಹುದೆ?'

'ಊರ್ಮಿಳೆ ಒಂಟಿಯಾಗಿಹಳಲ್ಲಿ ನಾನಿಲ್ಲಿ ಒಂಟಿ
ನಾರುಮಡಿಯಲಿಹಳೆಂದ ಭರತ ಬಂದವನು
ಮರುಗುತಿರಬಹುದು ನೆಲದಲ್ಲಿ ಮಲಗುತಲಿ
ನೆನೆದು ಲಕ್ಷ್ಮಣನ ದುಃಖಿಸುತಿರಬಹುದು ಸತಿ'

'ನಾನಿದ್ದೆ ಪತಿಯೊಡನೆ ಹದಿಮೂರು ವರ್ಷ
ಎಣಿಸುತಿಹೆ ನಾನೀಗ ಒಂದೊಂದು ದಿನವ ಯುಗವಾಗಿ
ಅವಳೆಂತು ಇರಬಹುದು ಈ ಹದಿಮೂರು ವರ್ಷ
ಶಿವ ಶಿವ ನನ್ನಂತೆ ಅವಳಲ್ಲವೇನು, ತ್ರಿಜಟೆ?'

'ದುಃಖಿಸದಿರಿ ದೇವಿ ಬರುವನು ಶ್ರೀರಾಮ
ದುಃಖಿಸಿದರೇನು ಫಲವುಂಟು ತಾಯಿ
ತಿಳಿದವರು ನೀವು ತಿಳಿಸಿಕೊಡಬಲ್ಲವರು
ತಳೆಯಿರಿ ನಿಮ್ಮೊಳಗೆ ನೀವು ಶಾಂತಿಯನು'

'ಮಂಡೋದರಿಗೇನು ಸುಖವಿಹುದು ದೇವಿ
ಕೊಂಡಾಡುವಳೆಂದೆಂದು ಪತಿಯ ಅತಿಯಾಗಿ
ಅರಸನಿಗಿಹುದೆ ಕರುಣೆ ಪತ್ನಿಯೊಳು
ಪರಿಪರಿಯ ನೋವು ಸತಿ ಮಂಡೋದರಿಗೆ'

'ನಿಮ್ಮನಿಲ್ಲಿ ತಂದಿಟ್ಟಿರುವ ಕೊರಗೊಂದು ಕಡೆ
ತನ್ನ ಮಾಂಗಲ್ಯದ ಚಿಂತೆ ಮತ್ತೊಂದು ಕಡೆ
ಹೇಳುವಳು ವಿಧವಿಧದಿ ಬುದ್ಧಿವಾದವನು ಪತಿಗೆ
ಕೇಳಲೊಲ್ಲನು ಮೂರ್ಖ ದಶಕಂಠ ಗರ್ವಿಷ್ಠ'

'ಸನಿಹವಾಗಿಹುದು ದಶಕಂಠನಿಗೆ ಸಾವಿನ್ನು
ಕನಸುಗಳು ಅವನಿಗಿಲ್ಲ ನಾ ಬಲ್ಲೆ ದೇವಿ
ಬಿಡಿ ನಿಮ್ಮ ದುಃಖವನು ನೆನೆಯಿರಿ ಈಶನ
ಹಿಡಿಯಿರಿ ವ್ರತವನು ಒಂದೆ ಮನದಿ'

ನುಡಿದಳು ತ್ರಿಜಟೆ ಸಾಂತ್ವನಗೊಳಿಸುತ ಸೀತೆಯ
ನುಡಿದಳು ತ್ರಿಜಟೆ ಮನತುಂಬಿ ಒಲವಿಂದ
ಸತಿ ಸೀತೆಯನು ಸಂತೈಸುತಲವಳು
ರಕ್ಕಸವಂಶಜೆ ತ್ರಿಜಟೆ ನಡೆದುಕೊಂಬಳು ಮೃದುಭಾವದಿ

'ಯಾವ ಜನ್ಮದ ಮೈತ್ರಿ ಈ ಪ್ರೀತಿ ತ್ರಿಜಟೆ?'
ಕಾವ ಈಶನು ನಿನಗೆ ಸನ್ಮಂಗಳ ನೀಡಲಿ
ನೀನಿರಲು ನಾನಿಲ್ಲಿ ಪರಮ ಸುಖಿ ಸಖಿ
ನೀನಿರದಿರೆ ನನ್ನ ಗತಿಯ ನೆನೆಯಲಾರೆನಮ್ಮ

ಪಟ್ಟಾಭಿಷಿಕ್ತನಾಗಲು ದೊರೆ ಸುಗ್ರೀವ
ಕೊಟ್ಟಮಾತನಾಗಲೆ ಮರೆತು ಲೋಲುಪನಾಗಿರಲು
ಕ್ರೋಧದಿಂ ಲಕ್ಷ್ಮಣನು ಕಿಷ್ಕಿಂಧೆಗೆ ಧಾವಿಸಿದ
ಯೋಧನಾದವನ ಲಕ್ಷಣವಿದೇನು? ಎಂದ

ಸಿಡಿಲು ಗುಡುಗನು ಮೇಘ ಸಿಡಿಸುವೊಲು ಲಕ್ಷ್ಮಣನು
ಸಿಡಿಸಿ ಕೋಪವತೋರೆ ಸುಗ್ರೀವನು
ಕ್ಷಮಿಸು ನನ್ನಪರಾಧ ತಪ್ಪಮಾಡಿದೆನೆನುತ
ಒಡನೆ ಕರಸಿದ ತನ್ನ ಸೇನೆಗಳನು ಸುಗ್ರೀವ

ಹಿರಿಯ ಸೈನ್ಯವನೆಲ್ಲ ಒಟ್ಟುಗೂಡಿಸಿ ಅವನು
ಹೊರಡಿಸಿದನವನು ಹನುಮನನು ದಕ್ಷಿಣ ದಿಕ್ಕಿಗೆ
ತನ್ನೊಡತಿ ಸೀತೆಗೆ ಇದನು ಕೊಡೆನ್ನುತ
ರಾಮ ಹನುಮನಿಗಿತ್ತ ಮುದ್ರೆಯುಂಗುರುವ

ಪಡೆದದನು ಪವನಸುತ ಹನುಮ ಭಕ್ತಿಯಲಿ
'ಹೆಡೆಮುರಿಯ ಕಟ್ಟಿಕೆಡವುವೆನೆ' ಂದ ಶತ್ರುಗಳ
ಬಂದನಲ್ಲಿಗೆ ನೂರುಕೋಟಿ ವಾನರ -
ಸೇನೆಯೊಡನೆ ಭರದಿಂದ ಬೀಗುತಲಿ

ಪವನಸುತ ಹಿಗ್ಗಿನಿಂ ನಡೆಯುತಿರಲು
ವಿಧಿಸಿದನವರಿಗೆ ಸುಗ್ರೀವ ಕಟ್ಟಾಜ್ಞೆಯನು
ಪರ್ವತ ಚಿಲುಮೆ ಅಡವಿಗಳಲಿ ಅಡಗಿ
ಎಲ್ಲೆಡೆ ಸೈನ್ಯವ ನೆಲೆಗೊಳಿಸಿರೆಂದನಾ ಭೂಪತಿ

ಕಳುಹಿಸಿದನು ಸುಗ್ರೀವ ಸುಷೇಣನ ಪಶ್ಚಿಮಕೆ
ಕಳುಹಿಸಿದ ಶತಬಲ ಮೊದಲಾದವರ ಉತ್ತರಕೆ
ಸೀತಾನ್ವೇಷಣೆಯ ಕಾರ್ಯವಹಿಸಿದನವರಿಗೆ
ಅತಿವಿನಯದಿ ಜಯಕಾರವಂ ಮಾಡುತ ನಡೆದರು

ಬಾರಿ ಬಾರಿಗು ಗಿರಿಕಂದರಗಳಲಿ ಹುಡುಕುತ
ಏರಿ ಹತ್ತಿ ಇಳಿದು ಕಂದಕದೊಳು ಇಣುಕುತ
ನಡೆದರು ಗಂಧಮಾದನರು ಅಂಗದನ ಆಣತಿಯಂತೆ
ಮಹಾಸತಿ ಸೀತೆಯ ಹುಡುಕುತ ದಕ್ಷಿಣಕೆ

ನೋಡಿದರಲ್ಲಿ ಅತಿಸನಿಹದಲ್ಲಿ ಗುಹೆಯೊಂದನು
ನೋಡಿದರು ಅದರ ಭವ್ಯತೆಯ ಕಂಡು ಬೆರಗಾಗಿ
ಹೊಕ್ಕರೊಳಗೆ ಕಂಡರಲ್ಲಿ ಮಣಿರತ್ನಗಳ
ಭ್ರಮಿಸಿದರು ಕನಸಿನ ಲೋಕದಲಿಹೆವೆಂದು

ವೃದ್ಧ ತಾಪಸಿಯೋರ್ವಳಿದ್ದು ತನ್ನಯ ಮೈಗೆ
ಹೊದ್ದು ಕೃಷ್ಣಾಜಿನವ ಉಟ್ಟು ನಾರುಮಡಿ
ದಿವ್ಯಭಾವವು ಹೊಂದಿ ಅಲ್ಲಿ ವಾಸಿಸುವಳು
ಆರು ನೀವೆಂದೆಲ್ಲ ಕೇಳಿದವಳು ಬಹುಶ್ರೇಷ್ಠೆ

'ಎಲ್ಲ ವಾನರಸೇನೆ ಇಲ್ಲಿ ಬಂದಿಹುದೇಕೆ?
ಎಲ್ಲಿ ಹೊಗುವಿರೆಲ್ಲ ಬನ್ನಿ ಇಲ್ಲಿ
ಇಲ್ಲಿ ರುಚಿರುಚಿಯಾದ ಹಣ್ಣಿಹವು ನೀವೆಲ್ಲ
ಮೆಲ್ಲಿರೆಂದಳು' ವೃದ್ಧೆ ಸ್ವಯಂಪ್ರಭೆಯು

ಅರಸಿ ರಾಮನ ಸತಿಯ ದಣಿದು ಬಂದಿಹ ನಮಗೆ
ಕರುಣದಿಂ ಸಂತೈಸಿ ಫಲವನಿತ್ತೆ ತಾಯಿ,
ಸರಿದಾರಿ ಮುಂದೆಮಗೆ ತೋರೆನಲು ಆ ವೃದ್ಧೆ.
ಶರಧಿಯಕಡೆ ಪಯಣಿಸಲು ದಾರಿ ತೋರಿದಳು

ದೊರೆಯು ಆ ಸುಗ್ರೀವ ನಮಗೆ ನೀಡಿದ ಅವಧಿ
ಕಿರಿದು ಆಗುತಲಿಹುದು ದಿನ ದಿನವು
ಅರಸು ಮುನಿವನು ಹನುಮ ಮುಂದೆ ಮಾಡುವುದೇನು?
ಅರಿತು ಯೋಚನೆಮಾಡು ನೀನು ಈಗ

ಪರಮ ಆಪ್ತನು ನೀನು, ಸಿಡುಕ ಸುಗ್ರೀವನು
ಮೀರಲಾರನು ನಿನ್ನ ಮಾತನೆಂದು
ಬರಿದೆ ಕಾಲವ ಕೊಲದೆ ಯುಕ್ತಿಯೊಂದನು ಹುಡುಕಿ
ಅರುಹಿ ಅವನಿಗೆ ನಮ್ಮನುಳಿಸು ಹನುಮ

ಸಂಪಾತಿ ಎದುರಾದನಾಗ ಅರುಹಿದ ಸೀತಾ ವೃತ್ತಾಂತ
ಅಂಗದನೀಗ ಭಯವಂ ತೊರೆದು ಎದೆಸೆಟೆಸಿ ನಿಂತ
ಸಹಚರರೊಡನೆ ಧೀರಯೋಧನಂತೆ ಮುನ್ನಡೆದ
ಇಹುದಲ್ಲಿ ಸಮುದ್ರದೊಳು ವಿಧವಿಧದ ತಿಮಿಂಗಿಲಗಳು

ಕೇಳಿದನು ಅಂಗದ ಸಮುದ್ರವನು ಲಂಘಿಸಲು
ಕೇಳಿದ 'ಬಲಭೀಮರೆ ಮುಂದೆ ಬನ್ನಿರೆ'ನುತ
ಬರಲೊಲ್ಲರು ಯಾರು ದುರ್ಬಲರವರು
ಹುರಿದುಂಬಿಸಿದನಾಗ ಜಾಂಬವ ಹನುಮನ

'ಏಕೈಕ ವೀರ ನೀ ವಾನರ ಸೇನೆಗೆ ಹನುಮ
ಸಾಕುಮಾಡಿನ್ನು ಚಿಂತೆಯ ನೀ ರಾಮಲಕ್ಷ್ಮಣರಿಗೆ ಸಮನು
ಮಹಾಬಲನು ವೇಗವಂತನು ಸ್ಥೈರ್ಯಭಾವ ಉಳ್ಳವನು
ಸರಿಸಾಟಿ ನಿನಗಾರುಂಟು ಸಮುದ್ರವನುಲ್ಲಂಘಿಸೆ' ಂದ

ಜಿಗಿದನು ಹನುಮ ಮಹೇಂದ್ರ ಪರ್ವತಕೆ
ಎತ್ತರದ ಶಿಖರವನೇರಿ ನಿಂತನು ಮಹಾಬಲನು
ಶ್ರೀರಾಮಬಂಟ ಹನುಮಂತ ವೇಗವಂತ
ನೂರುಯೋಜನ ವಿಸ್ತೀರ್ಣದ ಸಾಗರವ ದಾಟಿದನು

ಸಮುದ್ರವಂ ಲಂಘಿಸಿದ ಪವನಸುತ ಹನುಮ
ಸೂಕ್ಷ್ಮರೂಪವಂ ಧರಿಸಿ ಮಹಾಬಲನಾದನಿಂತು
ಲಂಕೆಯಂ ಪ್ರವೇಶಿಸಿದನು ಶರವೇಗದಿ
ವೀಕ್ಷಿಸುತ ಕೆಲ ಕ್ಷಣ ಸುತ್ತಮುತ್ತಲು ನಿಂತನಲ್ಲಿ

ಪವನಸುತ ವಿಸ್ಮಯದಿ ಕಾಂಬನು ಲಂಕೆಯನು
ಸಾಲುಸಾಲಾಗಿರ್ಪ ಪ್ರಸಾದಂಗಳ ಕಂಡು
ನಿಂದಿರಲು ಹನುಮಂತ ಪ್ರವೇಶದ್ವಾರದಲಿ
ಲಂಕಾಧಿದೇವತೆಯು ತಡೆದಳವನನ್ನು

'ಮಹಾಬಲ ನೀ ಎನ್ನ ಧಿಕ್ಕರಿಸಿ ಹೋಗುವೆ ಎಲ್ಲಿಗೆ?
ಶೋಭಿಸದು ನಿನಗದು ಭೂಷಣವಲ್ಲ
ಹನುಮಂತ ನಿಲ್ಲು ನೀನಲ್ಲೆ ಬರದಿರು ಮುಂದೆ'
ಎಂದೆನುತ ಲಂಕಾಧಿ ದೇವತೆ ತಡೆದಳವನನ್ನು

ಬಿಡದಿರಲು ರಕ್ಕಸಿಯು ಲಂಕೆಯೊಳಗವನನ್ನು
ಹೊಡೆದುರುಳಿಸಿದ ಮುಷ್ಟಿಯಲೊಂದು ಬಿಗಿದು
ಬಿದ್ದಳು ಲಂಕಾಧಿದೇವತೆ ನೆತ್ತರ ಕಾರುತಲ್ಲಲ್ಲಿ
ನುಡಿದಳು ಹನುಮನೊಡನೆ ಭಕ್ತಿಯಲಿ ಕೈಮುಗಿದು

'ವೀರನೋರ್ವನು ಬಂದು ಕೆಡವಲು ನಿನ್ನನು
ರಾಕ್ಷಸರಿಗೆ ಭಯವು ಕಾಡುವುದಾಗ
ಮುಂದೆ ಅವರ ಅವನತಿ ಕಾದಿಹುದು
ಎಂದು ಕೊಟ್ಟಿಹ ಬ್ರಹ್ಮನೊಂದು ವರವ ಎನಗೆ'

ಆ ಗಳಿಗೆ ಇಂದು ಸಮೀಪಿಸಿಹುದು
ನೀ ನಡೆದು ಒಳಗೆ ಹುಡುಕು ಜಾನಕಿಯ
ವಿನಾಶ ಬಂದೆರಗಿದೆ ಲಂಕೆಗೆ ಲಂಕೇಶನಿಗೆ
ಹೋಗು ನೀ ರಾಮನಬಂಟ ಹನುಮಂತ

ಬಂದ ಹನುಮಂತ ಲಂಕೆಯೊಳಗೆ ಹುಡುಕುತ
ನಿಂದ ಅರಮನೆಯೊಳಗೊಂದು ಕ್ಷಣ ಹನುಮ
ಸುತ್ತಲೆಲ್ಲ ದೃಷ್ಟಿ ಹರಿಸಿ ಸೀತೆ ಇಹಳೇನೊ ಎನುತ
ಕತ್ತನೆತ್ತಿತ್ತ ಚಾಚುತ್ತ ನಡೆದ ಅರಮನೆಯೊಳಗೆ

ಕಾಣಲೊಲ್ಲಳು ಹಂಸನಂದಿನಿ ಹಸನ್ಮುಖಿ ಸೀತೆ
ಕಾಣದಿರಲು ಸತಿ ಕಂಡಕಂಡಲ್ಲಿ ಹುಡುಕುತ ಹನುಮ
ಅಂತಃಪುರದೊಳಗೆ ಕಾಲಿಟ್ಟನಾಗ ಪವನಸುತ
ಎಲ್ಲೆಲ್ಲು ಲಕ್ಷ್ಮಿ ತಾಂಡವಾಡುತಿಹುದ ಕಂಡು

ನಡೆದ ಹನುಮ ಸ್ತ್ರೀ ಸಮೂಹವಿರುವೆಡೆಗೆ
ಇಡುತ ಹೆಜ್ಜೆಯ ಮೆಲ್ಲಮೆಲ್ಲಗೆ ಹನುಮ
ಕಂಡ ಲಕ್ಷ್ಮೀ ಪುತ್ರಿಯರ ಸುಪುತ್ರಿಯರ
ವರ ರಮಣಿಯರ ಸಮೂಹವಂ ಕಂಡು

ನಡೆದನಲ್ಲಿಂದ ಹನುಮ ಕಂಡನಲ್ಲಿ ಅಂತಃಪುರದ ಸ್ತ್ರೀಯರನು
ರಾವಣನ ಅರ್ಧಾಂಗಿ ಸತಿ ಮಂಡೋದರಿಯನು
ಕಂಡು 'ರಾವಣ ಇರಬಹುದೆ ಸೀತೆ ಇವಳೆ'ಂದು ಭ್ರಮಿಸಿ
ಕಡುಪಾಪಿ ರಾವಣ ನೀನೆಂದು ಗೊಣಗಿಕೊಂಡ

ಕ್ಷಣದಲ್ಲಿ ಸುಳಿವು ದೊರಕಿತಾಗವನಿಗೆ
ಸರಸಿಜಾಕ್ಷಿ ಸತಿ ಸೀತೆ ಪರಮ ಪೂಜಿತೆ
ಇವಳಲ್ಲ ಜಾನಕಿ ಎಂದರಿತನಾಗ ಹನುಮ
ನಡೆದನಲ್ಲಿಂದ ಅಶೋಕವನವನು ಅರಸುತ್ತ

ಬಂದ ಧೀರ ಹನುಮ ಅಶೋಕವನಕೆ
ನಿಂದಲ್ಲಿ ನೋಡಿದನು ವನದ ಸೊಬಗನು
ನೂರಾರು ಬಳ್ಳಿಗಳು ವಟವೃಕ್ಷ ಅಶೋಕವನಗಳ ಸುತ್ತಿ
ಸುಳಿದು ನಿಂತು ಹಬ್ಬದನುಭವವ ಕೊಡುತಿರಲು

ಹನುಮ ಉಲ್ಲಾಸದೊಳು ಪದವಿಡುತ ನಡೆದ
ಸಮೃದ್ಧ ವೆನಿಪ ಫಲಪುಷ್ಪಗಳಿರಲು ಆ ವನದಲ್ಲಿ
ಪ್ರಮದೆಯ ಕಾಣದೆ ಹನುಮ ಕಂಗೆಡಲು
ಕಂಡನೊಂದು ಭವ್ಯ ವಟವೃಕ್ಷವನು ಅಲ್ಲೆ

ಕಂಡ ಸುತ್ತುವರೆದಿಹ ರಕ್ಕಸಿಯರನು
ಭಂಡರಂತಾಡುತಿಹ ಕೊಬ್ಬಿದ ಗೂಳಿಗಳನು
ನಡೆದರಮನೆಯಿಂದ ಬರುತಿಹ ಲಂಕೇಶನನು
ನೋಡುತ ನಿಂತನಲ್ಲಿ ಹನುಮ ಅಚ್ಚರಿಯಲ್ಲಿ

ಭಂಡರ ಗಂಡ ರಂಡೆಯರ ಮಿಂಡ
ಚಂಡ ಲಂಕೇಶ್ವರನು ಬರುತಿರಲು ಹನುಮ
ಅಲ್ಲಿಹಳು ಸೀತೆ ಎಂದರಿತು ಮರೆಯಾದನಲ್ಲೆ
ರಕ್ಕಸಿಯರು ಸರಿದು ಸ್ವಾಗತಿಸಲು ಅರಸನ

ಹನುಮ ನಿಂತಲ್ಲೆ ನಿಂತು ನಿರುಕಿಸುತಿದ್ದನಾಗ
ಘನಮಹಿಮ ಪುರುಷೋತ್ತಮನ ಬಂಟ ಹನುಮಂತ
ಮಹಾಸತಿಯನು ಕಾಂಬ ತವಕದಿ ನಿಂತನಲ್ಲೆ
ಹನುಮ ನಿಂತಿರಲು ಮರವೊಂದರ ಮರೆಯಲ್ಲಿ

'ರಾವಣ ಗಳಹಿದನು ಸತಿ ಸೀತೆಯ ಮುಂದೆ
ಕಾವ ಕರುಣಾಕರನು ನಾನೆ ನಿನಗೀಗ
ಮಂಗಳೆ ಬಾರೆನ್ನ ಬಳಿಗೆ ಸುರಿಹೊನ್ನ ಕೊಡುವೆ
ಸಂಗವ ಬಯಸಿ ಬಂದೆಯಾದೊಡೆ ನೀನೆ ಪಟ್ಟದರಸಿ'

'ಕೊಡುವೆ ನಾ ನಿನಗೆ ನೀ ಬಯಸಿದುದೆಲ್ಲವ
ಕೊಡುವೆ ಲತಾಂಗಿ ರತ್ನಕಂಠೀಸರವ
ಕೊಡುವೆ ಒಡ್ಯಾಣ ತೋಳ ಬಂಧಿಗಳ
ಪಟ್ಟದರಸಿಯ ಮಾಡಿ ಕಿರೀಟವ ತೊಡಿಸುವೆ'

'ತಿಳಿದುಕೋ ನಾ ನಿನಗೆ ದಾಸಾನುದಾಸ
ತಿಳಿದುಕೋ ದೇವಿ ನಾ ನಿನ್ನ ಮೆಚ್ಚಿಹೆನು
ವರಿಸು ನನ್ನನು ದೇವಿ' ಎಂದು ಹಲುಬುತ ಅರಸ
ಪರಿಪರಿಯಲಿ ಪ್ರಲಾಪಿಸುತ ನಿಂತಿರಲು

'ಗಳಹದಿರು ಅರಸನೆ ಈ ಪರಿಯಲಿ
ಹೇಳುವೆನು ಕೇಳು ನೀನೊಬ್ಬ ಹುಲ್ಲು ಕಡ್ಡಿ
ಎನ್ನ ಹೃದಯದ ರಾಮ ಶ್ರೀರಾಮಚಂದ್ರ
ಎನ್ನ ಪ್ರಾಣಕಾಂತನಿಗೆ ಸಮ ಯಾರಿಲ್ಲ ರಕ್ಕಸನೆ'

'ನಿನಗಿದು ತರವಲ್ಲ ಲಂಕೇಶ ಮೂರ್ಖನೇ
ತಲೆ ಎತ್ತಿ ನೋಡಳೀ ದೇವಿ ಭೂಮಿಕಾ
ಹತ್ತು ತಲೆ ಇದ್ದರೇನಾಯ್ತು ರಾವಣ ನಿನಗೆ?
ಮತಿ ಉಂಟೆ ಪೇಳೆಂದಳಾ ಮಹಾಸತಿ

ಮತಿವಂತೆ ರಾಮಚಂದ್ರನ ಮಡದಿ
ಮುತ್ತುಮಣಿ ಮಾಣಿಕ್ಯ ದಂತಿರ್ದ ಆ ದೇವಿ
ಹತ್ತು ಮಾತುಗಳು ಕಿವಿಗೆ ಬಿದ್ದು ಅಪವಿತ್ರವಾಗಲು
ಸತಿ 'ಶಿವ ಶಿವ' ಎಂದೆನುತ ಜಪಿಸಿದಳು ಶಿವನ

'ಗಜ ಕೇಸರಿ ಯೋಗದವನು ಎನ್ನ ಶ್ರೀರಾಮ
ನಿಜಗುಣ ನಿಧಿಯು ಎನ್ನ ಶ್ರೀರಾಮಚಂದ್ರ
ಭರತ ವಂಶಕೆ ಭೂಷಣನು ಆ ನನ್ನ ರಾಘವನು
ನಿರುತ ನೆನೆದವರ ರಕ್ಷಿಪ ದೊರೆ ಅವನು'

'ಕಂಡಿಹೆನವನ ಪೌರುಷವನಂಗನೆ
ಚೆಂಡಾಡುವೆನು ಅವನ ರುಂಡವಂ ಸುದತಿ
ದಂಡಿಸದೆ ಬಿಡೆನು ಸುಮಂಗಲೆ' ಎನುತ
ರಾವಣನು ಕೆಂಡವಂ ಉಗುಳುತ ನಡೆದನಲ್ಲಿಂದ

ಮರವನೇರಿದನೀಗ ಹನುಮ ಒಡನೆ
ಇರಲು ಮರದ ಬುಡದಲ್ಲಿ ಸೀತೆ
ನಿರುಕಿಸಿದ ಸುತ್ತಲೆಲ್ಲ ರಕ್ಕಸಿಯರಿರಲು
ಮರವನು ಗಲಗಲನೆ ಅಲುಗಿಸಿದ ಹನುಮ

'ಮಾತೆ ನಾ ಬಂದಿಹೆನು ಶ್ರೀರಾಮಚಂದ್ರನ ಭಕ್ತ
ಹನುಮಂತನೆಂದು ನನ್ನ ಕರೆಯುವರು ಜನರು
ಕೊಡಲು ನಿನಗೀ ಮುದ್ರಿಕೆಯ ಕಳುಹಿಹನು
ಇಳಿದು ಬರಲೇ ತಾಯಿ ನಿನ್ನಡಿದಾವರೆಗೆ' ಎಂದ

'ನಿನ್ನ ಕೊರಳ ಮಾಂಗಲ್ಯದಲ್ಲಿಹ ಚಂದ್ರಿಕೆಯ ಕಂಡೆ
ನೀನೆ ಮಹಾಸತಿ ಸೀತೆ ಎಂದರಿವಾಯ್ತು ಎನಗೆ
ನಿಜ ಭಕ್ತನಿಗೆ ತೋರುವುದು ಚಂದ್ರಿಕೆಯು'
ಸತಿ ಹನುಮನ ಕಂಡು ಬೆರಗುವಡೆದಳು ದೇವಿ

'ಇಳಿದು ಬಾ ಭುಜಬಲಿ ನಂಬಿದೆನು ನಾ ನಿನ್ನ
ಇಳಿದು ಬಾ ಶ್ರೀರಾಮಚಂದ್ರನ ಸಖನೆ
ನನಗೀಗ ನೀ ಸುತನಿಗೆ ಸಮ' ಎನುತ
ಸತಿ ಆದರಿಸಿ ಕುಶಲವಂ ವಿಚಾರಿಸಿದಳಾಗ

ಇತ್ತ ಹನುಮ ಸತಿ ಸೀತೆಗೆ ಮುದ್ರಿಕೆಯನು
ಇತ್ತು ನುಡಿದನು ಹನುಮ ಶ್ರೀರಾಮಚಂದ್ರನ ವಿವರ
ಅರುಹಿದನು ಬರುತಿಹರು ಮಹಾಬಲರೊಡಗೂಡಿ
ಶ್ರೀರಾಮ ಲಕ್ಷ್ಮಣರು ನಿನ್ನ ಬಿಡುಗಡೆ ಸನಿಹದಲ್ಲಿಹುದು

'ಹಸಿವಾಗಿಹುದೆನಗೆ ದಣಿದಿಹೆನು ನಾ ದೇವಿ
ಹುಸಿಯಲ್ಲವಿದು ಬಹುಬಳಲಿಹೆನು ತಾಯಿ
ನೀನೊಪ್ಪಿದರೆ ಫಲಗಳಿಹುದಿಲ್ಲಿ ಭುಂಜಿಸಲೆ?'
ಎನಲು ಹನುಮ ಮಹಾಸತಿಯೊಡನೆ

'ಕೇಳಿ ನಿನ್ನ ಮಾತನು ಎನ್ನೆದೆ ಬಿರಿದಿಹುದು
ಹಸಿದು ಬಂದೆಯಾ ಮಗನೆ ಬಹುದೂರದಿ
ಹಸನಾದ ತಿನಿಸುಗಳಿಲ್ಲಿಲ್ಲ ನಿನಗೆ ಕೊಡಲು
ವಿಧವಿಧದ ಫಲಗಳಿಹವು ವನದಲ್ಲಿ'

'ತಿನ್ನಯ್ಯ ಸಿರಿ ಮಗನೆ ನನ್ನ ಒಲವಿನ ಸುತನೆ
ತಿನ್ನು ಬಾ ನನ ಕಂದ ನಿನಗಿಷ್ಟವಾದ ಫಲಗಳನು
ಮರವೇರಿ ಗದ್ದಲವೆಸಗದಿರು ರಕ್ಕಸರಿಹರು
ಇರುವುದಿಲ್ಲಿ ದುಷ್ಟ ರಕ್ಕಸರ ಪಾಳೆಯು ಮರೆಯದಿರು

ಸತಿಯ ಅನುಮತಿ ಪಡೆದು ಮರವೇರಿದ ಹನುಮ
ಗಲ್ಲಗಲ್ಲನೆ ಅಲುಗಿಸುತಲಿ ರೆಂಬೆಕೊಂಬೆಗಳ
ಉದುರಿಸಿದ ಫಲಗಳನು ಭೂದೇವಿಗೆ
ಅದು ಉದುರಿ ಸದ್ದು ವಿಕಟವಾಗಿ ಪ್ರತಿಧ್ವನಿಸಲು

ನಿದ್ದೆ ತಿಳಿದೆದ್ದು ಕುಳಿತರು ರಕ್ಕಸಿಯರು
ಬಿದ್ದಿವೆ ವಿಧವಿಧದ ಹಣ್ಣುಗಳು ಕೆಳಗೆ
'ಬರದೆ ಬಿರುಗಾಳಿ ಮಳೆ ಬಿದ್ದವಿವು ಹೇಗೆ'ಂದು
ನೋಡುತಿರಲು ರಕ್ಕಸಿಯರು ಬೆರಗುವಡೆದು

ಮರ ಮರಕೆ ಹಾರುತಿಹ ಕಪಿಯ ಕಂಡರಾಗ
'ಯಾರಿದು ಈ ಕಪಿಯು ಸಾಗರವಲಂಘಿಸಿ ಬಂದಿಹುದು?
ಎಲ್ಲಿಂದ ಬಂದಿತೀ ಕಪಿ ಎಳೆದು ಬಾಲ ಕೆಳಗಿಳಿಸಿ?'
ಎಂದು ಅವರವರೊಳಗೆ ಗದ್ದಲವ ಮಾಡುತಿರಲು

ದೂರು ಒಯ್ದನು ಒಬ್ಬ ಲಂಕೇಶನರಮನೆಗೆ
'ಕರೆತನ್ನಿ ಕಪಿಯ ಹೆಡೆಮುರಿ ಬಿಗಿದು' ಎಂದನಾ ಅರಸ
ದೊರೆ ನುಡಿದೊಡೆ ಕಿಂಕರನೋರ್ವ ಪೊರವಂಟ
ಸೇನೆಯೊಡನೆ ಕಪಿಯ ಹೆಡೆಮುರಿಕಟ್ಟಿ ತರಲು

ನೋಡಿದರು ಕಿಂಕರ ರಕ್ಕಸರು ಹನುಮನ ಭುಜಬಲವ
ನೋಡಿ ಹೆದರಿ ಪಲಾಯನ ಗೈದರು ಅರಸನ ಬಳಿಗೆ
ಮತ್ತೆ ಪ್ರಹಸ್ತನ ಸೋಲು ಸುಮಂತನ ಸಂಹಾರ ನಡೆದು
ನುಡಿದರು ರಕ್ಕಸರು ಸೋಲು ಕಾದಿದೆ ತಮಗೆಂದು

ಗತಿಸಿದರು ಅಮಾತ್ಯ ಪುತ್ರರು ಸೇನಾಪತಿಗಳೈವರು
ಗತಿಸಿದ ಲಂಕೇಶನ ಸುತ ಅಕ್ಷಯಕುಮಾರ
ಪರಾಕ್ರಮದೊಳು ಹೋರಾಡಿ ಮಡಿದ ನೀ ಕುವರ
ಅಸುರಲೆಲ್ಲರು ಸಾಯಲು ಲಂಕೇಶ ಕಿಡಿಕಾರುತ

ಸಕಲ ವಿಧದಸ್ತ್ರಗಳ ಹೊಂದಿರುವ ಇಂದ್ರಜಿತುವನು
ಕಳುಹಿಸಿ ರಾವಣ ನುಡಿದ ಅವನೊಳು ಇಂತೆಂದು
'ಪಡೆದಿಹೆ ನೀ ಬ್ರಹ್ಮಾಸ್ತ್ರವನು ಬ್ರಹ್ಮನಿಂದಲೆ
ಪಡೆದ ಅಸ್ತ್ರವವನು ಪ್ರಯೋಗಿಸು ಸೋಲಿಗಿಳಿಸದು ನಿನ್ನ'

‘ಹೋಗಿ ಬಾ ಇಂದ್ರಜಿತು ಜಯವಾಗಲಿ ನಿನಗೆ
ಹೋಗಿ ಬಾ ನನಕಂದ ನೀನನ್ನ ಪ್ರಿಯಪುತ್ರ
ವಿಧಿಯಿಲ್ಲ ಯುದ್ಧರಂಗಕೆ ಕಳುಹಿಸುತಿಹೆನು
ಮದವೇರಿದ ಆನೆಯಂತಿಹನು ಹನುಮ’

‘ಸಮಾನ ಶಕ್ತಿ ನಿನಗುಂಟು ಇಂದ್ರಜಿತು
ಆತ್ಮಬಲವುಂಟು ಬುದ್ಧಿಬಲವುಂಟು
ಸಮಯಾ ಸಮಯದ ಲೆಕ್ಕಾಚಾರ ನಿನಗುಂಟು
ಸಮಯ ನೋಡಿ ಪ್ರಹರಿಸು ಹನುಮನ’ ಎಂದ

ರಥವೇರಿ ಇಂದ್ರಜಿತು ಸೇನೆಯೊಡನೆ ಬರಲು
ಅತಿವೇಗದಿ ಹನುಮ ಆಕಾಶದೆತ್ತರಕೆ ಲಂಘಿಸಿದ
ಬಲಾಬಲದಲಿ ಸಮರೀರ್ವರು ಧುರೀಣರು
ಕದನದಲಿ ಸೋಲನರಿಯರು ಭುಜಬಲರು

ಸ್ವಾಯಂಭು ಮಂತ್ರವನುಚ್ಚರಿಸಿ ಇಂದ್ರಜಿತು
ಅಭಿಮಂತ್ರಿಸಿ ಎಸೆದ ಬ್ರಹ್ಮಾಸ್ತ್ರ ಪವನ ಸುತನ ಮೇಲೆ
ಬಂಧಿಯಾದನು ಹನುಮ ಕೆಲ ಮುಹೂರ್ತಗಳ ಕಾಲ
ಎಳೆದೊಯ್ದರು ಅವನ ಅರಮನೆಯೊಳಗೆ

ಆಂಜನೇಯ ನಿಂತಿರ್ದನಾಗ ದಶಕಂಠನ ಮುಂದೆ
ಅಂಜನಾಪುತ್ರ ಆಂಜನೇಯ ರಕ್ಕಸರ ಕಡುವೈರಿ
‘ಯಾರು ನೀ’ ಎಂದು ದಶಕಂಠ ಘರ್ಜಿಸಲು
‘ಶ್ರೀರಾಮನ ಸದ್ಭಕ್ತ ನಾನೆಂ’ದು ನುಡಿದ ಹನುಮ

‘ಬಂದಿಹೆನು ನಾನಿಲ್ಲಿಗೆ ಸೀತೆಯನರಸುತ್ತ
ಕೊಂದು ನಿನ್ನನು ಸತಿಯ ಪಡೆಯುವೆನು
ನೀನಾರು ಎನ್ನ ರಾಮನ ಮುಂದೆ ಲಂಕೇಶ?
ನಿನ್ನವಸ್ಥೆ ಮುಗಿದುದಿಲ್ಲಿಗೆ ನೆನಪಿಡೆ’ಂದ

'ನೀ ಸೋಲೊಪ್ಪಿ ಶರಣಾದೊಡೆ ರಾಮ ಕಾಪಿಡುವನು
ನೀನೊಪ್ಪಿ ತಪ್ಪು ನೆಪ್ಪುಗಳ ರಾಮನಿಗರ್ಪಿಸಿದೊಡೆ
ಅನುಗ್ರಹಿಪನು ಕರುಣಾನಿಧಿ ಕಾರುಣ್ಯನಿಧಿ
ಕ್ಷಮಿಸುವನು ನಿನ್ನ ಶ್ರೀರಾಮಚಂದ್ರ ಗುಣವಂತ'

'ದೂತನ ವಧೆಯು ನಿಂದ್ಯ ಪ್ರಭು ಲಂಕೇಶ್ವರ'
ಭ್ರಾತೃ ವಿಭೀಷಣ ನುಡಿಯೆ ರಾವಣನೊಳು
'ಕಪಿಗೆ ಬಾಲವೇ ಭೂಷಣ'ವೆಂದ ದಶಕಂಠ
'ಸುಡಿರದನು ದಯೆಬೇಡ' ಎಂದ ಸಹಚರರಿಗೆ

ಹಿಡಿದು ಕಪಿಯ ಬಾಲಕ್ಕೆ ಸುತ್ತಿದರು ವಸ್ತ್ರವನು
ಸುರಿದದಕೆ ಎಣ್ಣೆಯಂ ಹಚ್ಚಿದರು ಬೆಂಕಿ
ಹಾರಿದನು ಹನುಮ ನಭದೆತ್ತರಕೆ ಮಿಗಿಲೆತ್ತರಕೆ
ಹೊರಸಾಗುತ್ತ ಅಲ್ಲಲ್ಲಿ ಎಲ್ಲೆಲ್ಲು ವನವನೆಲ್ಲ ಸುಟ್ಟನು

ನೋಡಿದಳು ಸತಿ ಹನುಮ ಮಾಡುತಿಹ ಕಾರ್ಯವಂ
ನೋಡಿ ಕಂಗೆಟ್ಟು 'ರಾಮ ರಾಮ' ಎಂದು ಹಲುಬಿದಳು
ಪನ್ನಗಶಯನನ ಮೊರೆಹೊಕ್ಕು ಬೇಡಿಕೊಂಡಳು ತಾಯಿ
'ರಕ್ಷಿಸು ಪುರುಷೋತ್ತಮ ಪುಣ್ಯಪುರುಷ ಇವನ' ಎಂದು

'ರಕ್ಷಿಸು ಹನುಮನನು ಈ ನಿನ್ನ ಪ್ರಿಯಸಖನ
ರಕ್ಷಿಸು ಯಶೋವಂತನೆ ಶ್ರೀರಾಮಚಂದ್ರನೆ
ನಿನ್ನ ಪ್ರಿಯಸಖನು ಎನ್ನ ಪ್ರಿಯಬಂಧುವಾಗಿಹನು
ರಕ್ಷಿಸೈ ಅವನನ್ನು ಅವನೆಸಗಿರುವ ಕಾರ್ಯವಂ ಮನ್ನಿಸು'

'ಅವನಿತ್ತ ಅಸುನೀಗಿದರೆ ನಿನಗಾರು ಅರುಹುವರು?
ಕಾವ ವಲ್ಲಭನೆ ಕರುಣಾನಿಧಿ ಅನುಗ್ರಹಿಸು ಅವನ
ಹನುಮನಿಗೆ ಶಕುನಗಳು ದಾರಿಗಡ್ಡಬರದಿರಲಿ' ಎಂದು
ತಾಯಿ ಚೂಡಾಮಣಿಯನು ಅವನ ಕೈಗಿಡುತ ಹೇಳಿದಳು

'ಹೆದರದಿರು ತಾಯಿ ನಾ ಸುಖವಾಗಿ ಇರುವೆ
ಹೈದ ನಾನಲ್ಲ, ಎದೆಸೆಟೆಸಿ ನಿಲ್ಲಬಲ್ಲ ಛಲ ಎನಗುಂಟು
ಉರಿದು ಹೋಗಲಿ ವನ, ಶುಭವಾಗಲಿ ನಿಮಗೆ
ಬರುವೆನಮ್ಮಾ ಇನ್ನು ಕಳಿಸಿಕೊಡಿ' ಎಂದ ಹನುಮ

'ಸುಡಲಿ ಅರಸನರಮನೆಯು ತಾಯಿ
ಸುಡಲಿ ಅವನ ಗರ್ವ ರೋಷಗಳು
ಬರಲಿ ಅವನಿಗೆ ಸದ್ಭಾವನೆ ಎನುತ
ಹಾರಿದನು ಹನುಮ ಲಂಕಾಪುರಿಗೆ ರಭಸದಿಂ

ಪುರದ ದಹನದಲಿ ತೊಡಗಿದನು ಛಲದಂಕಮಲ್ಲ
ಶೂರಾಧಿ ಶೂರ ಭರದಿ ಸರಿದು ಒಳಹೊರಗೆಲ್ಲ
ದಹನ ಮಾಡುತ ನಡೆದನು ಸಮುದ್ರದತ್ತ ವಾಯುಪುತ್ರ
ಮಹಾಮಹಿಮ ಶ್ರೀರಾಮಚಂದ್ರನ ಸದ್ಭಕ್ತ

ಅದ್ದಿದನು ಹನುಮ ಬಾಲವಂ ಸಮುದ್ರದೊಳ್
ಎದ್ದು ಬಂದಲ್ಲಿಂದ ಹಾರಿದನು ಬುದ್ಧಿವಂತ
ಹಾರಿದನು ಹನುಮಂತ ಕಿಷ್ಕಿಂಧೆಗೆ ಸುಗ್ರೀವನಲ್ಲಿಗೆ
ಪರಿಪರಿಯಲ್ಲಿ ಬಣ್ಣಿಸಿದನು ಲಂಕೆಯ ವೈಭವವನು

'ಇಹಳಲ್ಲಿ ತಾಯಿ ಸೀತೆ ದುರವಸ್ಥೆಯಲಿ
ಬಹುವಿಧದಿ ನೆನೆಯುತ ರಾಮನಂ ಕಡು ದುಃಖದಲಿ
'ರಾಮ ರಾಮಾ' ಎಂದು ಹಲುಬುತಿಹ ಸತಿಯ ಕಂಡೆ
ಮಮಕಾರದಿ ಎನ್ನ ಕಂಡಳಾ ತಾಯಿ' ಎಂದನಾ ಹನುಮ

ಕೊಟ್ಟು ಚೂಡಾಮಣಿಯನು ಶ್ರೀರಾಮನಿಗೆ
ಇಟ್ಟು ಶ್ರೀರಾಮ ಜಾನಕಿಯರಲಿ ಭಕ್ತಿ ಭಾವವನು
ಕಾರ್ಯ ಪ್ರವೃತ್ತರಾಗಲು ಆಣತಿ ಕೊಡೆಂದ
ಶ್ರದ್ಧೆ ಭಕ್ತಿ ಭಾವದಲಿ ನಡುಬಾಗಿಸಿ ನಿಂತು ||

# ಲಂಕೆಯರಸನ ಅರಮನೆಯೊಳಗೆ

ಸಮಾಲೋಚನೆ ನಡೆಸಿದನು ಅರಸ ಲಂಕೇಶ
ಅಮಾತ್ಯರನು ಗುಪ್ತವಾಗಿ ಕರೆಸಿ ಸಭೆಗೆ
ಯುದ್ಧ ನಡೆಯಲಿ ಚೆಂಡಾಡುವೆನು ಮುಂಡಗಳ
ಬದ್ಧ ವಿಷಕಂಠ ನಾನೆಂದು ನುಡಿದ ಅರಸ

'ಬೇಡವಿದು ನಿನಗೆ ಭೂಷಣವಲ್ಲ ದೊರೆ
ಬೇಡ ನಿನಗಿದು, ಕಾಮಿಸಿದೆ ಪರ ಸತಿಯ
ಕಾಡಿದೆ ನೀ ಆ ಮಾನಿನಿಯ ನೋವು ಶಾಪವಾಗಿ
ಕಾಡುವುದದು ನಿನಗೆ' ಎಂದಳಾ ಮಂಡೋದರಿ

ಅನುಜ ವಿಭೀಷಣ ಬಂದನಲ್ಲಿಗೆ ಮೆಲ್ಲಗೆ
'ಅಣ್ಣ ನಿನಗಿದು ತರವಲ್ಲ ನಂಬೆನ್ನ ಮಾತು
ಶ್ರೀರಾಮ ಅಂತಿಂಥವನಲ್ಲ ಮತಿವಂತ
ಶ್ರೀರಾಮ ಸಾಮಾನ್ಯನಲ್ಲ ಅವತಾರ ಪುರುಷ'

ಕುಂಭಕರ್ಣ ನಿಂದಿಸಲು ರಾವಣನನು
'ಕುಂಭ ನಾ ಮೆಚ್ಚಿಹೆನು ಸೀತೆಯನು
ಮೂಲೋಕದಲಿಲ್ಲ ಅವಳಂಥ ಚೆಲುವೆ
ನನಗಾಗೆ ಮೀಸಲವಳು' ಎಂದ ರಾವಣ

'ಚೆನ್ನದ ಪುತ್ಥಳಿಯಂತಿಹಳು ಸುದತಿ
ಚೆನ್ನೆ ಅವಳೆನ್ನ ಮನದನ್ನೆ ಕುಂಭ
ವಿಶಾಲ ಕಂಗಳ ಸೂರ್ಯಪ್ರಭೆ
ಮೆಚ್ಚಿಹೆ ನಾನವಳನ್ನು ನನ್ನಿಚ್ಛೆಯ ತಿರಸ್ಕರಿಸದಿರು'

‘ಅನುಜ ನೀ ಎನ್ನ ಪ್ರಿಯಭ್ರಾತೃ ಕೇಳಯ್ಯ
ನಾನವಳ ಬಿಡಲಾರೆ ಕಾಮಾಗ್ನಿ ಸುಡುತಿಹುದು
ಎನ್ನ ಹೃದಯದ ಬೇನೆ ಅರಿತವನೆಂದರೆ ನೀನು
ನೀನೋರ್ವ ಎನ್ನ ಪರ ಎಂದು ನಾ ನಂಬಿಹೆನು’

ಹೊಗಳುತ ರಾವಣ ಕುಂಭನ ಮೇಲಿಡುತ ಪ್ರೀತಿ
ಸೊಗಗಾರ ಲಂಕೇಶನ ಮಾತಿಗೆ ಮರುಳಾದ ಭೂಪತಿ
‘ಇರುವೆ ಅಣ್ಣಯ್ಯ ನಿನ್ನ ಪರವಾಗಿ’ ಎನುತ ಕುಂಭ
ಬಿರುನುಡಿಗಳನಾಡುವುದ ನಿಲ್ಲಿಸಿದನಾಗ

ಸಭೆ ನಡೆದುದ ತಿಳಿದು ಸೀತೆ ದುಃಖಿಸಲು
ಜನಕರಾಜನ ಕುವರಿ ಜಾನಕಿದೇವಿ
ಮತಿಗೆಟ್ಟು ಹಲುಬುತ ಭೂಮಿಕಾ
‘ಯುದ್ಧನಡೆದರೆಷ್ಟು ನಷ್ಟ’ ಎನುತ ಕಂಗೆಟ್ಟಳು

‘ಇಷ್ಟದೈವ ಶ್ರೀರಾಮನ ನೆನೆ ನೆನೆದು ಸತಿ
ಕಷ್ಟ ಬರದಿರಲಿ ಲಂಕಾಪುರಕೆಂದು
ಬಗೆ ಬಗೆಯಲಿ ಪ್ರಾರ್ಥಿಸಿದಳು ದೇವಿ
ಸುಗಮವಾಗಲಿ ಲಂಕೆಗೆ’ನುತ ತಾಯಿ

‘ದುಷ್ಟರ ಶಿಷ್ಟರನ್ನಾಗಿಸು ಪ್ರಭು’ ಎನುತ ಸತಿ
ಕಷ್ಟಗಳ ಪರಿಹರಿಸು ಮುಗ್ಧ ಜನರಿಹರಿಲ್ಲಿ
ತ್ರಿಜಟೆ ವಿಭೀಷಣನಂತಹರು ಭೂಷಣರು ಪುರಕೆ
ಯುದ್ಧದಿಂದಾಗುವ ನಷ್ಟವ ಅನುಭವಿಸಲಾರರು

‘ಭೂದೇವಿಯ ಮಗಳು ಭೂಮಿಕಾ ಇವಳು
ಭೂಮಿ ತೂಕದ ಹೆಣ್ಣು ಜಾನಕಿದೇವಿ
ಬಯಸುವಳು ಸುದತಿ ಪರರ ಸುಖವನು
ಎಣಿಸಳೆಂದು ಅನ್ಯರ ಅವನತಿಯನು ದೇವಿ’

'ಕೇಳಲೊಲ್ಲನು ಎನ್ನ ಮಾತನು ಅಣ್ಣ ರಾವಣ
ಬಂದೆ ನಾನಿಲ್ಲಿಗೆ ಶ್ರೀ ರಾಮ ನಿನ್ನಡಿಗೆ
ಶರಣಾಗತಿಯ ಬಯಸಿ ಬಂದಿಹೆನು
ಕರೆದು ಕೊಳ್ಳೆನ್ನ ಪನ್ನಗಶಯನ' ಎಂದ ವಿಭೀಷಣ

'ಬೇಡ ಒಡೆಯ ಇವ ಹುಟ್ಟಿನಿಂದಲೆ ರಕ್ಕಸನು
ಬೇಡ ಇವನ ವಿಷಯದಲಿ ಕರುಣೆ
ಮಾಯೆ ಮುಚ್ಚಿಹುದೀಗ ನಿಮಗೆ ಪ್ರಭು
ಬೇಡ ಇವನ ತಂಟೆ ತಕರಾರು' ಎನಲು ಸುಗ್ರೀವ

'ಇರಬಹುದು ಇವನಲ್ಲಿ ಕೆಲ ದೋಷಗಳು
ಮಿತ್ರ ಭಾವದಿ ಬಂದಿಹನು ವಿಭೀಷಣನು
ದೋಷ ದೂರನು ಇವನು ಸತ್ಪಾತ್ರನು
ಬಯಸಿ ಬಂದಿಹನು ಶರಣಾಗತಿಯ'

ಸತಿ ಸೀತೆ ನುಡಿದಳು ತ್ರಿಜಟೆಯೊಡನೆ
ಮತಿವಂತ ವಿಭೀಷಣ ಶರಣಾದನಂತೆ -
ರಾಮನಿಗೆ, ವಿಪತ್ತು ಹರಿದು ಸಂಪತ್ತು ಪಡೆದ
ಆಪ್ತಮಿತ್ರನಾಗಿ ಪ್ರಭುದೇವರಿಗೆ

'ಬಿಡಿರಿನ್ನು ಶಂಕೆ ದೇವಿ ಬಿಟ್ಟುಬಿಡಿ
ಉಡುಗಿತಿಂದು ಲಂಕೆಯ ವೈಭವವು
ಭುಜಬಲ ವೃದ್ಧಿಸದು ಲಂಕೇಶನಿಗೆ
ತೊರೆದಿಹನಿಂದು ವಿಭೀಷಣ ಲಂಕೆಯನು'

ಎನಲು ತ್ರಿಜಟೆ ಸತಿ ಸೀತೆಯೊಳು
ಮಾನಿನಿ ನೆನೆದು ಶ್ರೀರಾಮನ ಭಜಿಸಿದಳು
ಅನುದಿನ ಮಹಾಸತಿ ಹಾಡಿಪಾಡುತಲವನ
ಪರಿಹರಿಸಿ ಕೊಳ್ಳುವಳು ಸಂಕಷ್ಟಗಳನು ||

# ಯುದ್ಧ

ಸಂಧಾನಕ್ಕೆಂದು ಕಳುಹಿಸಲು ಶಾರ್ದೂಲನ
ಬಂದನಲ್ಲಿಂದ ಸಖ ಶ್ರೀರಾಮಚಂದ್ರನೊಡೆ ಒಪ್ಪೆನೆಂದು
ನಡೆದರೆಲ್ಲ ಮತ್ತೆ ಶ್ರೀರಾಮನೊಡಗೂಡಿ ಸಮುದ್ರತೀರಕ್ಕೆ
ನಡೆದು ಬಂದರು, ಬಂದು ಪಡೆದರು ಸಮುದ್ರರಾಜನ ಸಲಹೆ

ನಲ ಕಟ್ಟಲುದ್ದೇಶಿಸಿದನೊಂದು ಸೇತುವೆ
ನಲನಿವನು ದೇವಶಿಲ್ಪಿ ವಿಶ್ವಕರ್ಮನ ಮಗನು
ಸುಲಭದಿ ಕಟ್ಟಲು ಇವನೊಬ್ಬನೆ ಸರಿಸಾಟಿ
ನಲನ ಕೆಲಸದೊಳು ಭಾಗಿಯಾದರು ನರವಾನರರು

ಅಳಿಲಿಗುಂಟಲ್ಲಿ ಸೇವೆ ಮನಸ್ಸು ಮಾಡಿದರುಂಟು
ಅಳಿಲು ಬಾಲವನದ್ದಿ ಅದ್ದಿ ತಂದಿತು ಮರಳು
ಉಳಿಯಿತದರ ಹೆಸರು 'ಅಳಿಲು ಸೇವೆ' ಎಂಬ ಮಾತಲಿ
ಎಳೆದ ರಾಮ ಪ್ರೀತಿಯಲಿ ಅಳಿಲ ಬೆನ್ನಿಗೆ ಚಿನ್ನದ ರೇಖೆ

ಗುಬ್ಬಿ ಮಾಡಿತು ಸೇವೆ ರೆಕ್ಕೆಗಳ ಹಿಗ್ಗಲಿಸುತ
ಗುಬ್ಬಿ ಚಂಚುವಿಂದೆತ್ತಿ ತಂದಿತು ಮರಳನು
ಹನಿ ಹನಿಯಾಗಿ ಕೂಡಿಸಿತು ಮರಳನು ತಬ್ಬಿಕೊಂಡು
ಗುಬ್ಬಿಗೆ ಇಟ್ಟ ಶ್ರೀರಾಮ ಕಣ್ಣಿಗೆ ಕಾಡಿಗೆ

ಇಟ್ಟಿರು ಒಬ್ಬೊಬ್ಬರೊಂದೊಂದು ಕೈ ಕೂಡಿಸಿದರು
ಹತ್ತು ಸಮಸ್ತರು ಕೂಡಿ ಕಟ್ಟಿದರು ಸೇತುವೆಯನು
ಮತ್ತೆಲ್ಲರು ಕೂಡಿ ಸೇನೆಯ ವ್ಯೂಹವನು ರಚಿಸಿದರು
ನೋಡಿ ಶುಕನು ಅರುಹಿದನು ರಾವಣನಿಗೆ

ಕಂಡು ಬಂದೆನು ಸೇನೆಯ ಶಕ್ತಿ ಇಮ್ಮಡಿ ಇಹುದು
ನೋಡಿ ಬಾ ಎಂದ ಅಷ್ಟುತ್ರಪಕ್ತಿಯ ಕಂಡು ಬಾ ಎಂದ
ಜಯಿಸಬಹುದು ಲಂಕೆಯಂ ಶ್ರೀರಾಮ
ಜಯಿಸುವನು ಲಕ್ಷ್ಮಣನು ವ್ಯೂಹದಲಿಹನು

'ಸಾರಣ ಬರಲಿ ದೇವದಾನವರು ಬರಲಿ
ಬರಲಿ ಗಂಧರ್ವ- ದೇವೇಂದ್ರರೆಲ್ಲರು
ಯಾರೆ ಬಂದರು ನಾ ಒಪ್ಪಿಸಲಾರೆ ಸೀತೆಯನು
ಬರಲಿ ಅವರೆಲ್ಲ ಯುದ್ಧಭೂಮಿಗೆ ರಣರಂಗಕೆ'

'ನೋಡಿದೆ ಮಹಾ ದಂಡನಾಯಕ ಸುಗ್ರೀವನ
ನೋಡಿದೆ ಹರನೆಂಬ ವಾನರ ನಾಯಕನ
ದಂಡನಾಯಕ ಜಾಂಬವಂತನ ಕಂಡೆ
ದಂಭನ ಕ್ರಧನ ದಳಪತಿಗಳೆಲ್ಲರ ಕಂಡೆ'

'ಕಂಡೆ ನಾನೀಗ ಶ್ರೀರಾಮಚಂದ್ರನ
ಕಂಡೆ ಹನುಮಂತನ ಅಂದವನ ಕಂಡಿದ್ದೆ
ಹೆದರಬಹುದೆ ನಾ ಇವರೆಲ್ಲರ ನೋಡಿ
ಯಾರೇನ ಹೇಳಿದರು ಹೆದರೆನು' ಎಂದನಾ ಲಂಕೇಶ

ಹೊಳೆಯಿತೊಂದು ವಿಷಯ ವಿಷಯಲಂಪಟಗೆ
ಹೊಳೆ ಹೊಳೆದು ವಿಷಯ ಬೆದಕಲವನನ್ನು
ನಿರ್ಮಿಸಿದನೊಂದು ಮಾಯೆಯಲಿ ರುಂಡವನು
ನಿರ್ಮಿಸಲದು ರಾಮನಂತಿರಲು ರುಂಡ

ಕಳುಹಿಸಿದನು ರಾವಣ ಸತಿ ಸೀತೆಯ ಬಳಿಗೆ
ಕಳುಹಿಸಿ ರಾಮ ಮರಣವನಪ್ಪಿಹನೆಂದು ಪೇಳಲು
ಸತಿ ಭ್ರಮಿಸಿ ಪರಿತಪಿಸಿ ದುಃಖಿಸಿದಳಾಗ
ಅತಿಯಾಯ್ತು ರಾವಣನ ಮತಿ ಇತಿಶ್ರೀಗದು ಕಾರಣವಲ್ತೆ?

ನೋಡಿದಳು ಶ್ರೀದೇವಿ ಭೂದೇವಿಯ ಮಗಳು
ನೋಡಿದಳು ಭೂಮಿತೂಕದ ಹೆಣ್ಣು ಭೂಮಿಕಾ ಇವಳು
ಪತಿವ್ರತೆ ಮಹಾಸತಿ ದಿವ್ಯದೃಷ್ಟಿ ಉಳ್ಳವಳು
ಪತಿಗಾಪತ್ತು ಬರಲಾರದೆಂದರಿತವಳು ಸತಿ

ಭಾವ ಪರವಶಳಾಗಿ ನೋಡಿದಳೊಮ್ಮೆ ರುಂಡವನು
ಕಾಮಿತಾರ್ಥನ ನೆನೆದಳು ಸತಿ ಮನವಿಚಲಿತವಾಗದಿರಲೆಂದು
ಕಂಡನಾಗ ಶ್ರೀಕರನು ಲಂಕಾಪುರದ ದ್ವಾರದಲಿ ದೇವಿಗೆ
ಕೋದಂಡ ರಾಮ ಶ್ರೀರಾಮ ಕಂಡನವಳ ದಿವ್ಯದೃಷ್ಟಿಗೆ

ಬಂದಳಲ್ಲಿಗೆ ಪ್ರಿಯಗೆಳತಿ ಸುರಮೆ ಸೀತೆಯ ಬಳಿಗೆ
ಚಂದದಿಂದವಳ ಸ್ವಾಗತಿಸುತ ಮಹಾಸತಿ
ಅಂದಳು ಸುರಮೆಯೊಂದಿಗೆ ಕಪಟಿ ರಾವಣನ -
ಕುತಂತ್ರವನು ಬಣ್ಣಿಸುತ ನುಡಿದಳಾ ದೇವಿ

'ನಂಬಲಾರೆ ನಾ ಗೆಳತಿ ರಾವಣನಾಡಿಹ ನಾಟಕವಂ
ನಂಬಬಹುದೆ ನಾ ನಿನ್ನ ಗೆಳತಿ ತ್ರಿಜಟೆಯನು
ಗ್ರಹಣ ಬಡಿದಿಹುದು ಲಂಕೇಶ್ವರನಿಗೆ
ಕಾಲಕೂಡಿಹುದು ಪಾಪದಕೊಡ ತುಂಬಿಹುದು'

ಸುರಮೆ ಎಂದಳಾ ಸತಿ ಸೀತೆಗೆ ಪ್ರಿಯದಿ
ಅರಿವಿದೆ ನಿನಗೆ ಸತಿ ರಾವಣನ ಮರೆತು ಬಿಡು
ಸುರಮುನಿಗಳು ಪ್ರಾರ್ಥಿಸುತಿಹರು ಹೋಮ ಹವನವಮಾಡಿ
ಶ್ರೀರಕ್ಷೆಯನಿತ್ತು 'ರಾಮಚಂದ್ರನಿಗೆ ಜಯವಾಗಲೆ'ಂದು

ವಾನರರು ಆಕ್ರಮಣವಂ ಮಾಡಿದರು ಲಂಕೆಗೆ
ವಾನರ ವೀರ ಕುಮುದ, ಶತಬಲಿ, ಶ್ರೀರಾಮ
ಲಕ್ಷ್ಮಣರು ಗವಾಕ್ಷರೆಲ್ಲ ಕೂಡಿದರು ಒಂದೆಡೆ
ಕೂಡಿ ಅವರೆಲ್ಲ ದಿಕ್ಕುದಿಕ್ಕಲಿ ಬಿಡಾರವಂ ಹೂಡಿದರು

ಹೊರಟಿತು ವಾನರಸೇನೆ ರಣಕಹಳೆಯನೂದುತ
ಪರಾಜಯ ಹೊಂದಿದರು ರಕ್ಕಸರು ದ್ವಂದ್ವಯುದ್ಧದಲಿ
ಇಂದ್ರಜಿತು ಅಂಗದನೊಡನೆ ಸಂಪಾತಿ ವಜ್ರಜಂಘನೊಡನೆ
ಹನುಮ ಜಂಬುಮಾಲಿನಿಯೊಡನೆ ಕದನಕ್ಕಿಳಿದರು

ಯುದ್ಧ ನಡೆಯಲು ಇಂದ್ರಜಿತು ಅಂಗದರೊಳು
ಮದಿಸಿದ ಆನೆಯಂದದಿ ಹೊಡೆದಾಡುತಲವರು
ಉರುಳಿಸಿದ ಇಂದ್ರಜಿತು ರಾಮಲಕ್ಷ್ಮಣರ
ಶ್ರೀರಾಮ ಲಕ್ಷ್ಮಣರು ಮೂರ್ಛೆಗೊಂಡರಾಗ

ರಾವಣ ಗಹಗಹಿಸಿ ನಗುತಿರ್ದನಾಗ
ಅವನೊಳಗಿನ ಪ್ರಜ್ಞೆ ಮಸಣವನಪ್ಪಿಹುದು
ಶಿವ ರಕ್ಷಿಸಿದ ತನ್ನನೆನುತ ರಾವಣನು
ಮದದಿಂದ ಮೆರೆಯುತ ನಡೆದ ಅರಮನೆಗೆ

ಕ್ಷಣ ಒಂದು ಯುಗವಾಗಲು ವಾನರರಿಗೆ
ಕಣ್ಣು ಬಿಟ್ಟನಾಗ ಜಗದೊಡೆಯ ಶ್ರೀರಾಮ
ಶಕ್ತಿಸಂಪನ್ನ ಸ್ಥೈರ್ಯವಂತ ಸುತ್ತ ನೆರೆದವರ
ನೋಡುತ ದೃಷ್ಟಿ ಹಾಯಿಸಿದ ಲಕ್ಷ್ಮಣನೆಡೆಗೆ

'ಸೌಮಿತ್ರಿ ಎನ್ನ ಜೀವಜೀವದ ನಂಟು
ಸುಮಿತ್ರೆಯ ಸುತನಿಗೇನಾಗಿಹುದು
ಏನಾಯ್ತು ಸೌಮಿತ್ರಿಗೆನುತ ಶ್ರೀರಾಮಚಂದ್ರ
ಕಣ್ಣೀರ್‌ಗರೆಯಲು ಅನುಜನ ನೆನೆದು

ಸುಗ್ರೀವರಾದಿಯಾಗಿ ಸಂತೈಸುತಲವನ
'ರಾಘವ ಚಿಂತಿಸದಿರು ಸೌಮಿತ್ರಿ ಸುಖವಾಗಿಹನು
ವಿಜಯ ವಿಕ್ರಮವ ನಾವು ಸಾಧಿಸುವೆವು
ನಿಜವಿದು ಶ್ರೀರಾಮಚಂದ್ರ' ಎಂದರಾಗ

ಗರುಡ ಬಂದನಲ್ಲಿಗೆ ವಿಷ್ಣುವಾಹನ
ಗರುಡ ಸರ್ಪಾಸ್ತ್ರದಿಂದ ಮುಕ್ತಗೊಳಿಸಿ
ನುಡಿದ ನೀವಿಂದು ಅಧಿಕ ತೇಜಸ್ಸು ಓಜಸ್ಸುಗಳ
ಪಡೆದಿರಿ ಎನುತ ಗರುಡ ಹಾರಿದ ನಭಕೆ

ಮಡಿದರು ಯುದ್ಧದಲಿ ಧೂಮ್ರಾಕ್ಷ ವಜ್ರದಂಷ್ಟ್ರರು
ಪ್ರಹಸ್ತರು ನೋಡಿ ರಾವಣನ ಎದೆನಡುಗಿತಾಗ
ನಿದ್ರೆಯಲಿದ್ದ ಕುಂಭಕರ್ಣನ ಎಬ್ಬಿಸಿದನೀಗ
ಮುದ್ಗರದಿಂದವನ ಎದೆಗೆ ಬಡಿದು ಎಬ್ಬಿಸಿದರು

ಎದ್ದು ಸುತ್ತ ತಿರುಗಿದ ಕುಂಭಕರ್ಣನಿಗೆ
ಇದ್ದುವಲ್ಲಿ ಬಗೆಬಗೆಯ ಭಕ್ಷ್ಯ ಭೋಜ್ಯಗಳು
ತಿಂದೆಲ್ಲವನು ಕುಂಭಕರ್ಣ ಪ್ರಸನ್ನನಾಗಿರಲು
ನಿದ್ದೆಯಿಂದೆಬ್ಬಿಸಿದ ಕಾರಣವ ತಿಳಿದು

ಧರಿಸಿದನು ಕುಂಭಕರ್ಣ ಯುದ್ಧದುಡಿಗೆ
ಧರಿಸಿ ನಡೆದನು ರಣರಂಗಕೆ
ವಾನರ ಸೇನೆ ಚೆಲ್ಲಾಪಿಲ್ಲಿಯಾಗಿ ಓಡಲು
ಭುಜಕೀರ್ತಿ ಭೂಷಣನು ಮುಗುಳು ನಕ್ಕನೊಮ್ಮೆ

ರಣಯಾತ್ರೆಗೆ ಹೊರಟ ಕುಂಭಕರ್ಣನ ಕಂಡು
ದಶದಿಕ್ಕುಗಳು ಬೆರ್ಚಿದುವು ಬೆದರಿ
ಯುದ್ಧ ವಿಶಾರದ ಕುಂಭಕರ್ಣನ ಕಂಡು
ವಿಧಿಯಿಂದೇನು ಕಾದಿಹುದೋ ಎಂದು ಬೆದರಿದರು ಜನರು

ಶೂಲ-ಮುದ್ಗರಗಳ ಪಿಡಿದು ಹೊರಟವನ ಕಂಡು
ಕಾಲ-ಭೈರವನಂತಿಹನೆಂದು ಕೊಂಡರು ಭಟರು
ಅತಿ ಭಯಂಕರ ಕುಂಭಕರ್ಣನು ಹೃದಯದಿ
ಅತಿಮಧುರನೆಂದು ಬಲ್ಲರು ತಿಳಿದವರು

ಭುಜಬಲದೊಂದಿಗೆ ಹೊಡೆದಾಡಲು ಕುಂಭಕರ್ಣನು
ಹತವಾದರೆಷ್ಟೋ ವಾನರರು ಬಹುಸಂಖ್ಯೆಯಲಿ
ರಣಧೀರ ಅರಿಭಯಂಕರ ಕುಂಭಕರ್ಣನು
ಕ್ಷಣಕ್ಷಣಕ್ಕು ವಿಲಕ್ಷಣವಾಗಿ ಹೊಡೆದಾಡುತಲಿರ್ದ

ಜನಕರಾಜನ ಕುವರಿ ಜಾನಕೀದೇವಿ
ಜನಕನರಮನೆಯ ಸುಖಭೋಗವಂ ಮರೆತು
ಭುವನದ ಭಾಗ್ಯನಿಧಿ ಭೂಮಿಕಾದೇವಿ
ಕ್ಷಣಕ್ಷಣಕು ಯುದ್ಧದ ವಿವರಂ ವಿಚಾರಿಸುತಿಹಳು

ನೆನೆಯುವಳು ಕಳೆದ ದಿನಗಳ, ನೆನೆದು ಮರುಗುವಳು
ನೆನೆಯುವಳು ಒಲಿದ ಶ್ರೀರಾಮನ ನೆನೆದು ಕೊರಗುವಳು
ಸಿರಿದೇವಿ ಸಿರಿಮೊಗದ ಸುದತಿ ಸತಿ ಅಯೋನಿಜ
ನಾರಿ ಕುಲನಾರಿ ಶೀಲವತಿ ಮಹಾಸತಿ

ಕೊರಗದಂತವಳ ಸುಖವಾಗಿರಿಸಿ ಕೊಂಬೆನೆಂದವನ
ಧಿಕ್ಕರಿಸಿ ಸತಿ ಇದ್ದಳು ಸುಖಭೋಗವಂ ಕಡೆಗಣಿಸಿ
ಹೇಳುವಳು ತಾಯಿ ಭುವನದ ಭಾಗ್ಯನಿಧಿ ತ್ರಿಜಟೆಗೆ
ಕೇಳು ಕೇಳೆನ್ನ ಗೆಳತಿ ಹೇಳುವೆನು ಕೇಳು

'ಕುಲನಾರಿಗಿರಬೇಕು ಗುಣನಡತೆಗಳು
ಶೀಲ ಸಂಪತ್ತು ಭಕ್ತಿ ಭಾವಗಳು ಸಮರಸಗೊಂಡು
ಕುಲಕೆ ಬಿರುದು ಅವಳಿಂದ ಮನೆಗೆ ನೆಮ್ಮದಿ ಅವಳಿಂದ
ಕಾಲ ಕರಗಲಿ ಶೀಲ ಉಳಿಯಲಿ ನಾರಿಗೆ ಶೋಭೆಯದು

'ಇದ್ದರನುಜರು ನವರತ್ನದಂತೆ ಬೆಸೆದು ಒಂದಾಗಿ
ಇದ್ದರು ಜನಮೆಚ್ಚುವಂದದಿ ರಾಮಲಕ್ಷ್ಮಣರು
ಎಣೆ ಇಲ್ಲದ ಪ್ರೀತಿ ರಾಮನಿಗೆ ಲಕ್ಷ್ಮಣನಲಿ
ಕಂಡರಿಯದ ಭಕ್ತಿ ಲಕ್ಷ್ಮಣನಿಗೆ ರಾಮನಲಿ'

ಇಂಥಸಂಬಂಧ ಕಂಡಿಲ್ಲ ನಾನೆಲ್ಲು ಗೆಳತಿ
ನೆನಪುಗಳು ಕಾಡುತಿವೆ ಕಾಡಲಿ ಈ ನೆನಪುಗಳು
ಯುದ್ಧ ನಡೆಯುತಿಹುದೀಗ ರಾಮ-ಕುಂಭಕರ್ಣರಿಗೆ
ಹತನಾಗುವನು ಕುಂಭಕರ್ಣ ಯುದ್ಧದಲಿ'

'ಭರತ ಕಾದಿಹನು ಪಾದುಕೆಗಳಂ ಪೂಜಿಸುತ
ಬಿರುದು ಬಾವಲಿಗಳ ಧಿಕ್ಕರಿಸುತಲವನು
ಪುರಜನರು ರಾಮನಂ ನಿರೀಕ್ಷಿಸುತಿಹರು
ವರಪೊತ್ತು ಬಂದವನು ಎನ್ನರಸ ಶ್ರೀರಾಮ'

'ಅತ್ತೆಯರು ವೃದ್ಧಾಪ್ಯದಲಿ ಬಳಲುತಿಹರು
ಉತ್ತಮರ ಮಗಳು ಊರ್ಮಿಳೆಯು
ಸೇವೆಯಲಿ ತತ್ಪರಳು ಮಹಾಸತಿ
ನೆನೆಯುತಿದೆ ಎನ್ನ ಮನ ಎಲ್ಲರಂ ಕುರಿತು'

'ಹೊಕ್ಕ ಮನೆ ಎನಗೆ ಬರಿ ಮಾತಿನ ಮನೆಯಲ್ಲ
ಸಿಕ್ಕ ಹೊನ್ನಗಣಿ ಬಂಗಾರದರಮನೆಯು
ಅಕ್ಕರೆಯಿಂದೊಡಗೂಡಿ ಬಾಳುವಂಥ ಮನೆಯದು
ಹತ್ತು ಮಾತಿನಲಿ ವರ್ಣಿಸಲಸದಳವೆನಗೆ'

'ನಡೆನುಡಿ ಒಂದಾದರೊಳಿತು ಬದುಕಲ್ಲಿ
ನುಡಿಯುವರು ಸುತ್ತುಲಿದ್ದವರು ಉತ್ತಮರ ಮಗಳೆಂದು
ಹೆತ್ತಮನೆ ಹತ್ತರಲ್ಲೊಂದೆಂದು ಭಾವಿಸಿದೊಡೆ
ಉತ್ತಮವದು ನಾರಿಗೆ ಬದುಕು ಸುಖವಲ್ಲಿ'

'ಹತವಾಗಲಿ ರಕ್ಕಸರವಂಶ ಅಳಿದು ಹೋಗಲಿ
ಹಿತವಾಗಲಿ ಶುಭ ತರಲಿ ಮಾನಿನಿಯರಿಗೆ
ವಿಜಯವಾಗಲಿ ಲಂಕಾಪುರಕೆ ಸನ್ಮಂಗಳವಾಗಲಿ
ತ್ರಿಜಟೆ ನುಡಿದಳಿಂತು ಸತಿಗೆ ಉತ್ತರವಾಗಿ'

ವಧಿಸಿದನು ಶ್ರೀರಾಮ ಕುಂಭಕರ್ಣನನು
ವಧಿಸಿದನು ದೊರೆ ಹತನಾದನು ರಾವಣನ ಅನುಜ
ಮರಣವಾರ್ತೆಯು ಬರಸಿಡಿಲಂತೆ ಬಂದೆರಗಲು
ರಾವಣ ದುಃಖಿಸಿದ ಶೂನ್ಯವಂ ನಿರುಕಿಸುತಲಿ

'ಯಾವ ಮೋಹದ ಬಲೆ ಒಂದುಗೂಡಿಸಿತೋ
ಯಾವ ದೈವವು ಇಂದು ನಮ್ಮೀರ್ವರನು ಅಗಲಿಸಿತೋ
ಕಾಣೆನೆ'ಂದು ಪೇಳುತ ರಾವಣ ಬಹುವಿಧದಿ ಹಂಬಲಿಸಿದ
ಕ್ಷಣಕ್ಷಣವು ಯುಗದಂತೆ ಕಳೆಯುತಿರಲು

ನೆನಪು ಎಳೆದೊಯ್ದಿತು ರಾವಣನ ಯುದ್ಧರಂಗಕೆ
ದುಃಖಿಸುತಲವನು ಅನುಜ ತನುಜರನು
ಬಂಧು ಬಾಂಧವರನು ಕಳುಹಿಸಿದ ಯುದ್ಧರಂಗಕೆ
ಮಡಿದರು ನರಾಂತಕ ದೇವಾಂತಕ ಮತ್ತಿತರರು

ಮಡಿದ ಲಕ್ಷ್ಮಣನಿಂದ ಅತಿಕಾಯ
ಮುಟ್ಟಿದ್ದೆಲ್ಲ ಮಣ್ಣಾಗುತಿರಲು ಚಿಂತೆ ಚಿತೆಯಾಯಿತು
ಲಂಕೆಯನು ಸುರಕ್ಷಿತವಾಗಿಡುವ ಬಗೆಯನರಿಯದೆ
ಲಂಕೇಶ ಕೊರಗುತ ಆಲೋಚನೆಯಲಿ ಮುಳುಗಿದನಿಂತು

ಹತರಾದ ದೇವಾಂತಕ ತ್ರಿಶಿರ ಅತಿಕಾಯರ
ನೆನೆದು ರಾವಣ ಕಂಬನಿದುಂಬಿದನು
ಇಂದ್ರಜಿತುವೆಂದ 'ನಾ ಬದುಕಿರುವೆ
ಬಿಸುಸುಯ್ಯದಿರಿ ತಂದೆ ಏಕಿನಿತು ನೋವು' ಎಂದು

ಹಿಂದೊಮ್ಮೆ ಹನುಮನ ಕಟ್ಟಿ ಅರಮನೆಗೊಯ್ದವನು
ಬಂದ ಕೆಚ್ಚೆದೆಯ ಕಲಿ ಇಂದ್ರಜಿತು ಬಂದ ಯುದ್ಧಕ್ಕೆ
ಬಿರುಸಿನಿಂದೋಡಾಡಿದುವು ಬಾಣಗಳು ಒಂದರ ಹಿಂದೊಂದು
ರಾಮಲಕ್ಷ್ಮಣರ ಇರುಕಿ ಮೂರ್ಛೆಗೊಳಿಸಿದುವು

ಹೆದರಿದರು ಸುಗ್ರೀವ ನೀಲ ಅಂಗದರು
ಹೆದರದಿರಿ ಎನುತ ಸುಷೇಣ ಔಷಧಿಗಳನರುಹಿದ
ಉಂಟಿಲ್ಲಿ ಅನತಿ ದೂರದಲಿ ಓಷಧಿಯ ಪರ್ವತ
ತಂದರಿಲ್ಲಿ ಅರೆದುಕೊಡುವೆನು ಎಂದ ಸುಷೇಣ

ಆಂಜನೇಯ ಬಗಲಲ್ಲಿ ಹೊತ್ತು ತಂದ ಓಷಧಿಯ ಪರ್ವತವನು
ಸಂಜೀವಿನಿ ಬೇರನು ಅರೆದು ಕುಡಿಸಿದ ಸುಷೇಣ
ಅರೆದು ಕುಡಿಸಲದು ಸಂಜೀವಿನಿಯಾಯ್ತು ನೋಡುನೋಡಲ್ಕೆ
ಯಶೋವಂತರು ಅತಿಬಲರು ಎದ್ದು ಕುಳಿತರಾಗ

ಬದುಕುಳಿದುವು ಮರಣವನಪ್ಪಿದ ವಾನರರು
ಬದುಕಿದುವು ಸಂಜೀವಿನಿಯನು ಸೇವಿಸಿ
ಅಸುನೀಗಿದರು ಅರಸನ ಅನುಜ ತನುಜರು
ಅನಾಥನಾಗಲು ದೊರೆ ಲಂಕೇಶ ಕಂಪಿಸುತಿದ್ದ

ನಿಕುಂಭ ಮಡಿದನಾಗಲೆ ಕೊಂದ ಶ್ರೀರಾಮ ಮಕರಾಕ್ಷನ
ಲಕ್ಷ್ಮಣ ಧಾವಿಸಿದ ರಾವಣಿಯ ಬಳಿಗೆ
ಹತನಾಗಲು ರಾವಣನ ಮಗ ರಾವಣಿ ಲಕ್ಷ್ಮಣನಿಂದ
ಹಿತತರುವೊಲು ವಾನರರಿಗೆ ಸುದ್ದಿ ಸಿಹಿಯಾಯ್ತು

ದ್ವಂದ್ವಯುದ್ಧದಲಿ ಮಡಿದ ಇಂದ್ರಜಿತು
ವಧೆಮಾಡಲು ಅವನ ಅರಸನರಮನೆಯಲ್ಲಿ
ಮಹಾಬಲರ ಸಂಖ್ಯೆ ಕ್ಷೀಣಿಸಿದುದನು ಕಂಡು
ಜಯ ತಮಗೆ ಶತಸಿದ್ಧವೆಂದರು ಶ್ರೀರಾಮನ ಬಂಟರು

ಸುದ್ದಿ ತಿಳಿಯಲು ಸೀತೆ ಹರ್ಷಿಸಿದಳಾ ಕ್ಷಣದಿ
ಕಂದಿದ ಮೊಗವರಳಿ ಬಿರಿಯಲು ಸಂತಸದಿ
ಹಂಚಿಕೊಂಡಳು ತ್ರಿಜಟೆಯೊಂದಿಗೆ ತನ್ನಾನಂದವನು
ಚಂದದಿಂದಾನಂದವನು ಅನುಭವಿಸುತಲೀರ್ವರು

ಮಹದಾನಂದ ಮಾನಿನಿಗೆ ಲಭಿಸಲು
ಸಾಹಸದಲಿ ಬಲಭೀಮನಂತಿಹ ಲಕ್ಷ್ಮಣನ ಪೊಗಳುತ
'ಶ್ರೀರಾಮನ ಭುಜಬಲಕ್ಕೆ ಇವನೊಬ್ಬ ಸಾಕು
ಅನುಜನೊಳು ತುಂಬು ಪ್ರೀತಿ ಶ್ರೀರಾಮಚಂದ್ರನಿಗೆ'

ಇಂದವನಿಂದ ಹತನಾದ ಇಂದ್ರಜಿತು
ಬೆಂದ ಮನಕಿಂದು ತಂಪು ದೊರಕಿದೆ
ಸಂದವು ಗೌರವಾದರಗಳು ಲಕ್ಷ್ಮಣನಿಗೆ
ಚಂದದಿಂದವನ ಹರಸುವರು ಮಂದಿ

'ಮಂದಮಾರುತ ಬೀಸುತಿದೆ ಹಿತವಾಗಿ
ತರುಲತೆಗಳು ಬಾಗಿ ಬಳುಕುತಿವೆ ಉಲ್ಲಾಸದಿಂ
ಕೆರೆ ತುಂಬಿ ಹರಿಯುತಿದೆ ನೋಡಲ್ಲಿ ತ್ರಿಜಟೆ
ಹೊಸ ಮನ್ವಂತರವನು ಆದರದಿ ಸ್ವಾಗತಿಸುತಿಹುದು'

'ಮಹೋದರನು ಗತಿಸಿದನು ದೇವಿ
ಮಹಾಪಾತಕಿಯು ರಾವಣನಿಗೆ ಅತಿಪ್ರಿಯನು
ಮಹೋದರನ ಕೊಂದವನು ಸುಗ್ರೀವನು
ಅಂಗದ ಮಹಾಪಾರ್ಶ್ವನ ಕೊಂದನಂತೆ'

'ಇನ್ನಿಹರು ಯಾರಲ್ಲಿ ನಡೆವುದು ಇಷ್ಟರಲಿ
ರಾಮರಾವಣರ ಯುದ್ಧ ದೇವಿ ನೋಡಲ್ಲಿ
ವಿಜಯದ ಪತಾಕೆಯನೆತ್ತಿ ಹಿಡಿವನು ರಾಮ'
ತ್ರಿಜಟೆ ದೇವಿಗುತ್ತರವಾಗಿ ಹೇಳಿದಳು ||

# ರಾಮರಾವಣರ ಯುದ್ಧ

ಗತಿಸಿದರೆಲ್ಲರು ಸೇನೆಯ ಬಲಾಬಲರು
ಮತಿತಪ್ಪಿ ನುಡಿದ ಲಂಕೇಶ ಕಿಡಿಕಾರಿ
'ಬಿಡೆನು ನಾನಿನ್ನು ರಾಮಲಕ್ಷ್ಮಣರನು'
ದಡದಡನೆ ಅತ್ತಿಂದಿತ್ತ ಓಡಾಡುತ ರಾವಣನು

ಅತಿರಥನು ಹತ್ತಿದನು ಕ್ರೋಧದಿಂ ರಥವನು
ಹತ್ತು ದಿಕ್ಕುಗಳಿಗೆ ಕೇಳ್ವ ತೆರದಿ ಸದ್ದುಮಾಡುತಲಿ
ಧ್ವನಿ ಪ್ರತಿಧ್ವನಿಗಳು ಕಂಪಿಸಲು ಪಶುಪಕ್ಷಿಗಳು
ಭೂಮಿ ಅದುರಿತು ಭೂಕಂಪನದಲಿ ಬಿರಿದು

ರಣರಂಗಕ್ಕಿಳಿದರು ರಾಮರಾವಣರು
ತೀಕ್ಷ್ಣಬಾಣಂಗಳಂ ಪ್ರಯೋಗಿಸುತಲೀರ್ವರು
ಪರಾಕ್ರಮದಲಿ ಹೋರಾಡುತಿರಲು ಮಾಯಾವಿ
ರಾವಣ ವಿಧವಿಧದ ರೂಪವಂ ಧರಿಸುತಿರ್ದ

ರಾವಣನಂದು ಹಿಮ್ಮೆಟ್ಟಿ ಅರಮನೆಗೆ ನಡೆದ
ಬರಲವನು ಮತ್ತೆ ಎದೆಸೆಟೆಸಿ ಯುದ್ಧರಂಗಕ್ಕೆ
ಇಂದ್ರನಿತ್ತ ರಥವನೇರಿ ಶ್ರೀರಾಮಚಂದ್ರ
ಯುದ್ಧಸನ್ನದ್ಧನಾಗಿ ಬಲಾಬಲವ ಪರೀಕ್ಷಿಸುತ್ತಿರಲು

ಮುಚ್ಚಿದುವು ಇಡಿಯಾಗಿ ಶ್ರೀರಾಮನ ವಜ್ರಾಯುಧಗಳು
ಬೆಚ್ಚಲಿಲ್ಲವನು ರಘುರಾಮ ಕೈಚಳಕದಿಂ ಬಿಚ್ಚಿದನು
ರೊಚ್ಚಿಗೆದ್ದನು ಗಂಡುಗಲಿ ಲಂಕೇಶ್ವರನು
ಕೊಚ್ಚಿಹಾಕುವೆನೆಂದು ಮುನ್ನುಗ್ಗಲು ಇರಿದು ಬಾಣಗಳು

ನೆತ್ತರಿಳಿದು ಬರಲು ಭುಜಗಳಿಂದ ರಾವಣ
ಸುತ್ತೊಮ್ಮೆ ನೋಡುತ ಸಾರಥಿಯ ನಿಂದಿಸಿದ
ಮತ್ತು ಬಂದಂತೆ ವರ್ತಿಸುತಿರ್ದ ರಾವಣನ ಸಾರಥಿ
ಮತ್ತೆ ಮತ್ತೆ ಹುರಿದುಂಬಿಸುತ ನಡೆಸಿದ ರಥವ

ಶಕುನಗಳು ವಿರೋಧವಾಗಿರ್ದುವು ರಾವಣನಿಗೆ
ಶುಭಸೂಚಕವಾಗಿರ್ದುವು ರಾಮನಿಗೆ
ಹೆದರುವನು ರಾವಣ ಭುಜಕೀರ್ತಿ ಪಂಡಿತ
ಹರ್ಷದಿಂದಲಿ ಶ್ರೀರಾಮ ಮುನ್ನಡೆಸುವನು ರಥವ

ನಡೆಯಿತು ರಾಮರಾವಣನಿರಿಗೆ ಘೋರಯುದ್ಧ
ನೋಡುವರು ಗಂಧರ್ವ ದೇವದೇವರು ಸೇರಿ
ಮಾಡುವರು ರಾಮನಿಗೆ ವಿಧವಿಧದ ಸಂಜ್ಞೆ
ಜಯಶಾಲಿ ನೀನಾಗೆಂದು ಧೈರ್ಯ ಸ್ಥೈರ್ಯವ ತುಂಬುವರು

ಉರುಳುರುಳಿ ರಾವಣನ ಹತ್ತು ತಲೆಗಳು
ಮರಮರಳಿ ಹುಟ್ಟಿಕೊಂಡವು ಕ್ಷಣದಿ
ಸಕಲ ಅಸ್ತ್ರಗಳ ಮರ್ಮವರಿತಿಹ ರಾವಣನ
ಕೊಲ್ಲುವ ಪರಿಯನರಿಯದೆ ಶ್ರೀರಾಮ ಬೆರಗುವಡೆದ

'ವೇದೋಕ್ತ ಮಂತ್ರವಿಧಿಯಿಂದ ಬ್ರಹ್ಮಾಸ್ತ್ರವ ಬಿಡೆಂ'ದು
ಹೇಳಲು ಮಾತಾಲಿಯು, ನೆನೆದು ಅಗಸ್ತ್ಯರ ಶ್ರೀರಾಮ
'ನನ್ನ ರಕ್ಷಿಸು ತಂದೆ' ಎನುತ ಬ್ರಹ್ಮಾಸ್ತ್ರವಂ ಕೈಗೆತ್ತಿಕೊಂಡ
ಉರುಳಿದುವು ಲಂಕೇಶನ ಹತ್ತುತಲೆಗಳಾಗ

ಸೀತೆ ಬಂದಳು ಮಂಡೋದರಿಯ ಬಳಿಗೆ
ಸತಿ ಭೂಮಿತೂಕದ ಮಗಳು ಭೂಮಿಕಾ ಇವಳು
ಸತಿ ಅಳುತಿರಲು ರಾವಣನ ನೆನೆನೆನೆದು
ನಡೆ ತಾಯಿ ರಾಮನ ಬಳಿಗೆ ಅವನೆನ್ನ ಹೃದಯದ ರಾಮ

'ಬಿಡನು ನಿನ್ನ ಮಾಂಗಲ್ಯವಳಿಯದು ತಾಯಿ
ನಡೆನುಡಿಯಲಿ ಒಂದೇ ಮನದವನು ಶ್ರೀರಾಮ'
ಎನುತ ಕರೆತಂದಳು ರಾಮನೆಡೆಗೆ
ಬಹುಕಾಲದ ಅಗಲಿಕೆಯ ಮರೆತಿಹಳಾ ದೇವಿ

ಪರರ ಕಷ್ಟದಲಿ ಭಾಗಿಯಾಗುತ ಸತಿ
ಶ್ರೀರಾಮನೊಡನೆ ನುಡಿದಳು ಸತಿ ಸೀತೆ
'ಇವಳು ರಾವಣನ ಪಟ್ಟದರಸಿ ಮಂಡೋದರಿ
ಇವಳು ಮಹಾಪತಿವ್ರತೆ ಮಾಂಗಲ್ಯಭಾಗ್ಯ ಅಳಿಯದಿರಲಿ'

'ಕರುಣೆ ತೋರಿ ಶ್ರೀಕಾಂತ ಸೋದರಿಯ ಮೇಲೆ
ಶ್ರೀರಾಮ ಎನ್ನ ಹೃದಯದ ರಾಮ' ಎನುತ
ಹಲುಬಿ ಹಂಬಲಿಸುತ ಸತಿಸೀತೆ ರಾಮನಲಿ
ಮಾನಿನಿಯ ಗುಣಗಾನ ಮಾಡುತಿರ್ದಳಾಗ

'ರಾವಣ ಗತಿಸಿದ ಸಮಯದಲಿ ನೆನೆಯಲು
ಕೊಟ್ಟೆನೊಂದುವರವ ನಾನವನಿಗೆ ದೇವಿ
ಅಂತ್ಯಕಾಲದೊಳೆನ್ನ ನೆನೆವರಿಗುಂಟು ಮೋಕ್ಷ
ವೀರಮರಣವನಪ್ಪಿದ ಧೀರನವನು ದಶಕಂಠ'

'ಗತಿಸಿರಬಹುದು ರಾವಣನು ರಣರಂಗದಲಿ
ಸತಿ ನಿನ್ನ ಹೃದಯದಲಿ ಸ್ಥಿರಸ್ಥಾಯಿಯವನು
ನೋಡಲ್ಲಿ ಜ್ವಾಲೆನಂದಿಲ್ಲ ಉರಿಯುತಿಹುದು
ಕಂಡೆಯಾ ನೀನದನು ಎಂದೆಂದು ನಂದದದು' ಎಂದ

'ನಿನ್ನ ಸೌಭಾಗ್ಯ ಅಳಿದಿಲ್ಲ ತಾಯಿ ನೆನಪಿಡು
ನನ್ನ ಮಾತೆಂದು ಸುಳ್ಳಲ್ಲ ನೀನು ಸೌಭಾಗ್ಯವತಿ
ಇಡು ಅವಳ ಹಣೆಗೆ ಕುಂಕುಮ ಗಂಧವನು ಸೀತೆ
ಮುಡಿಗೇರಿಸು ಮೊಲ್ಲೆಮಲ್ಲಿಗೆ' ಎಂದನಾ ರಾಮ

ನಡೆದು ತ್ರಿಜಟೆಯ ಸನಿಹ ಸತಿ ಸೀತೆ
ಕೊಂಡಾಡುತ ಶ್ರೀರಾಮನ ತ್ರಿಜಟೆಯೊಡನೆ
ನಡೆದುದನು ಅರುಹಿದಳವಳಿಗೆ
ಕೊಂಡಾಡುತ ಶ್ರೀರಾಮಚಂದ್ರನ ಸತಿ

ತ್ರಿಜಟೆಗೀಗ ಅಗಲಿಕೆಯ ನೋವು ತುಂಬಿಹುದು
ಕಿರಿದುಗೊಳಿಸುತ ಕಣ್ಣ ನೋವ ನುಂಗಿಕೊಳುವಳು
ಎದೆ ಬಿರಿದು ದುಃಖ ಒತ್ತರಿಸಿಬರಲು
ತಡೆಯಲೆತ್ನಿಸುವಳು ದೃಷ್ಟಿಕೀಲಿಸುತ

'ಬಲ್ಲೆ ನಾನಿನ್ನ ದುಗುಡವನು ತ್ರಿಜಟೆ
ಎಲ್ಲಿದ್ದರು ನಾನಿನ್ನ ಮರೆಯಲಾವುದೆ ತಂಗಿ?
ಒಳ್ಳೆಕಾಲವು ಬಂದಿಹುದು ನಿಮಗೆಲ್ಲ
ಸುಳ್ಳಲ್ಲವಿದು ವಿಭೀಷಣ ನಿಮ್ಮರಸನಂತೆ'

'ಮುಂದೆ ಸುಭಿಕ್ಷವು ತ್ರಿಜಟೆ ಲಂಕೆಗೆ
ಇಂದು ನೀನಿಲ್ಲಿದ್ದು ಅನುಭವಿಸು ಸುಖವನು
ಬರುವೆಯಾದರೆ ಕರೆದೊಯ್ಯುವೆ ಅಯೋಧ್ಯೆಗೆ
ಇರಬಹುದು ನೀನಲ್ಲೆ ನಿನ್ನಿಷ್ಟಬಂದಂತೆ'

ನುಡಿದಳಿಂತು ಜಾನಕಿ ತ್ರಿಜಟೆಗೆ ಪ್ರಿಯದಿ
ಒಡನೆ ಉತ್ತರಿಸಿದಳಾ ತ್ರಿಜಟೆ ಸೀತೆಗೆ
'ಬರಲೊಲ್ಲೆ ತಾಯಿ ನಾ ಹುಟ್ಟಿದ ಪರಿಸರವಿದು
ಹೆತ್ತಮ್ಮನಂತಿಹುದು ನನ್ನೂರು ನನಗೆ' ಎಂದಳು

'ಹೋಗಿ ಬನ್ನಿರಿ ತಾಯಿ ಇನ್ನು ನಿಮ್ಮೂರಿಗೆ
ಪರರ ಮನೆಯಲ್ಲಿದ್ದು ದಣಿದು ಸೊರಗಿಹಿರಿ ನೀವು
ಸುಖದ ದಿನಗಳು ಮುಂದೆ ಕಂಡುಬರುವುದು
ನಾ ಬಲ್ಲೆ ದೇವಿ ಹೋಗಿಬನ್ನಿರಿ ನಿಮ್ಮೂರಿಗೆ' ಎಂದಳು

ಪಟ್ಟವನು ಕಟ್ಟಿದರು ವಿಭೀಷಣನಿಗೆ ಕೊಟ್ಟರು ಲಂಕಾಧಿಪತ್ಯ
ಇಟ್ಟರು ಅವನ ಹಣೆಗೆ ಗಂಧಾಕ್ಷತೆಗಳನ್ನು ಸಂಭ್ರಮದಿ
ಹರಸಿದರು ರಾಮಲಕ್ಷ್ಮಣರು ವಿಭೀಷಣನ ಶುಭವನ್ನು ಹಾರೈಸಿ
ಪುರಜನರಿಗೆ ಒಳಿತಾಗುವಂತೆ ನಡೆಯೆಂದು ನುಡಿದರು

ಮುಗಿಸಿ ಕರ್ತವ್ಯವನು ಹೊರಟರು ರಾಮಲಕ್ಷ್ಮಣರು
ಬೀಳ್ಕೊಳುತ, ವಿಭೀಷಣನ ಸುಖವ ಬಯಸಿದರು
ಹಿಂದೆ ಹೊರಟಿತು ವಾನರ ಸೇನೆಯ ಹಿಂಡುದಂಡುಗಳು
ಸಂದುಹೋದವು ಕಷ್ಟಕೋಟಲೆಗಳೆಲ್ಲ ಹರಿದು ಹೋದುವು

ಕರೆದು ತಂದರು ಅಶೋಕವನದಲ್ಲಿರ್ದ ಸೀತೆಯನು
ಬರುವಾಗ ಸೀತೆ ಅರಮನೆಯೊಳಗಡಿಇಟ್ಟು
ಹಲುಬುತಿರ್ದ ನಾರಿಯರ ಸಂತೈಸಿ ಬಂದಳು
ಭೂದೇವಿಯ ಮಗಳು ಭೂಮಿಕಾ ಇವಳು ||

## ಪಾತಿವ್ರತ್ಯದ ಸತ್ವ ಪರೀಕ್ಷೆ

ಸಂತಸದಿ ನಲಿದಿರುವ ಸತಿಯನೋಡುತ ರಾಮ
ಅಂದುಕೊಂಡನು ಮನದಿ 'ಇವಳು ಗುಣಶೀಲೆ'
ಎನ್ನುವುದ ನಾನೇನೋ ನಂಬುವೆನು ಅಂತೆಯೆ
ಪುರಜನರು ನಂಬಲಿದನೆಂತೆಂದು ಯೋಚಿಸಿದ

ಉಪಾಯ ಒಂದು ಹೊಳೆಯಿತು ಶ್ರೀರಾಮನಿಗೆ
ಅಪಾಯವಾಗದೆಂದು ಸೀತೆಗೆ ಮಹಾಸತಿ ಅವಳು
ನಿರ್ಮಿಸಿದ ಯಜ್ಞಕುಂಡವನು ಅವಳು ಹೊಕ್ಕುಬರಲೆಂದು
ರಕ್ಷಿಸುವನು ಯಜ್ಞೇಶ್ವರ ಬಲ್ಲೆ ನಾನೆಂದುಕೊಂಡ

ಶ್ರೀರಾಮ ಹೀಗೆಂದು ಯೋಚಿಸುತ ಲಕ್ಷ್ಮಣಗೆ
ಆಜ್ಞಾಪಿಸಿದ ಒಂದು ಚಿತೆಯ ನಿರ್ಮಿಸಲು
'ಪ್ರಶ್ನೆಗುತ್ತರವಿಲ್ಲ ಪ್ರಶ್ನೆಕೇಳುವರಿಲ್ಲ ಏನಿದು ವಿಚಿತ್ರ'
ಸುತ್ತನೆರೆದವರೆಲ್ಲ ನೋಡುತಿಹರು ಯಜ್ಞಕುಂಡವನು

'ಇದ್ದೆ ಸತಿ ನೀ ರಾಕ್ಷಸರ ಸಮ್ಮುಖದಲ್ಲಿ
ಬಿದ್ದು ನೀ ಯಜ್ಞಕುಂಡಕೆ ಎದ್ದು ಬಂದರೆ
ಒಪ್ಪಿಕೊಳ್ಳುವೆ ನಾ ನಿನ್ನ ಎದೆಗಪ್ಪಿಕೊಳ್ಳುವೆ' ಎನಲು
ಸದ್ದಿಲ್ಲದೆ ಬಂದಳು ದೇವಿ ಯಜ್ಞಕುಂಡದ ಬಳಿಗೆ

'ಸರಸ ಬೇಡಣ್ಣಯ್ಯ ತರವಲ್ಲ ನಿನಗಿದು'
ಸರಸತಿ ರಮೆಯರಿಗೆ ಸರಿಮಿಗಿಲು ನನ್ನತ್ತಿಗೆ
ನಿನಗಿದೋ ಕೋಟಿ ಪ್ರಣಾಮ ಎನುತ ಲಕ್ಷ್ಮಣ
'ಎನ್ನಮಾತು ಕೇಳಣ್ಣಯ್ಯ ಸೀತೆ ಮಹಾಸತಿ' ಎಂದ

ಕೇಳಲಿಲ್ಲ ರಾಮ ಅನುಜನಾಡಿದ ಮಾತನು
ಕೇಳಬಹುದೇ ಪುರಜನರು ಅಲ್ಲಿತ್ತು ಘನಮೌನ
ನೋಡಿದನು ಶ್ರೀರಾಮ ಅನುಜನೆಡೆ ಮೌನದಲಿ
ಸುಗ್ರೀವ ಹನುಮರೆಲ್ಲ ದುಃಖಿಸುತಿರ್ದರಾಗ

'ಬಾಲಬ್ರಹ್ಮಚಾರಿ ಬಲಿಯಿಂದ ಮೂಲೋಕ ಅಳೆದವನೆ
ಬಲ್ಲವರೊಳು ಬಲ್ಲವನಾಗಿ ಮೆರೆದಂಥವನೆ
ಎಲ್ಲವೂ ನೀನಾಗಿ ಎಲ್ಲವನು ಅಲ್ಲವಾಗಿಸುತ ನಿಂತವನೆ
ನಮಿಸುವೆನು ನಾ ನಿನಗೆ ಹೇ ದೇವದೇವನೆ'

ವಿಮಲ ನೇತ್ರನೆ ಅಧೋಕ್ಷಜನೆ ಅಪ್ರಮೇಯನೆ
ಕರುಣಿಸು ಪ್ರಭು ಕಾರುಣ್ಯ ನಿಧಿ ಹೇ ಜಗದೀಶ
ಕರುಣಾಳು ಘನಶ್ಯಾಮ ಸೀತೆಯ ಕತೆ ಇದು
ನಾರಿಕುಲಕೆ ಸ್ಥೈರ್ಯವ ನೀಡುವಂಥ ಕತೆ ಇದು'

ಅರಳಿ ಬರಲಿ ಎನ್ನೊಡಲ ಅಗ್ನಿಯ ಕಿಡಿಯೊಂದು
ನಾರಿ ಕುಲಕೆಲ್ಲ ವರವಾಗಿ ಪರಿಣಮಿಸಲೆಂದು
ಹಾರಿರಲು ಸತಿ ಯಜ್ಞಕುಂಡಕೆ ಹಿಡಿದೆತ್ತಿದ ಅಗ್ನಿದೇವ
ಹಾರವಾದಳು ದೇವಿ ಶ್ರೀರಾಮನ ಕೊರಳಿಗೆ ತೋಳ್‌ತುಂಬಿ

ಪುಷ್ಪವೃಷ್ಟಿಯ ಕರೆಯೆ ದೇವಾಧಿದೇವಗಣ
ಪರಮ ಸತಿ ಪರಮಾತ್ಮನಲಿ ಒಂದಾದಳೆಂದು
ಇದಕಂಡು ಜನಸ್ತೋಮ ಸಂಭ್ರಾಂತಿಗೊಳಗಾಗಿ
ಜಯಕಾರಮಾಡಿದರು ಸಂತಸದಲಿ ನಿಂತು

ನಡೆದಳು ಸೀತೆ ಆನಂದದಿಂ ಶ್ರೀರಾಮಲಕ್ಷ್ಮಣರ ಕೂಡಿ
ನಡೆದಳು ದೇವಿ ಹಿಂದಿನ ಕಷ್ಟಗಳೆಲ್ಲವ ಮರೆತು ಮುಂದೆ
ನಡುದಾರಿಯಲಿ ಕಂಡ ಅಗಸ್ತ್ಯಾಶ್ರಮಕೆ ಮಣಿದು
ಸಡಗರದಲಿ ಗೋದಾವರಿಯಲಿ ಮಿಂದಳು ದೇವಿ

ಬಂದಳಾ ಸತಿ ಬಯಸುತ ಶ್ರೀರಾಮನ ಸುಖವ
'ಎಂದೆಂದು ಅನುಗ್ರಹಿಸು ಓಲೆ ಭಾಗ್ಯವನೆ'ಂದು
ವಂದಿಸಿ ನದಿಗೆ ದೇವಿ ನಡೆದಳು ಮುಂದೆ
ಒಂದು ಮಾತಿಲ್ಲದೆ ಮೌನ ಗೌರಿಯಂತಿರ್ದಳಾಗ ||

## ಸೀತಾ ಪರಿತ್ಯಾಗ

ಬಂದರು ಅಯೋಧ್ಯಾನಗರಿಗೆಲ್ಲ
ಕಳೆದು ಹದಿನಾಲ್ಕು ವರ್ಷವನವಾಸ
ತಾಯಿ ಕೌಸಲ್ಯೆ ಸುಮಿತ್ರೆ ಕೈಕೆಯರು ಬಂದು
ಆದರಿಸುತಲವರನ್ನು ಅಪ್ಪಿಕೊಂಡು ಮುತ್ತಿಕ್ಕಿದರು

ಪುರಜನರು ಬಂದು ನಿಂದರು
ಹರುಷದಲಿ ಹರಸುತಲವರನ್ನು
ಬಂದ ಭರತನು ಪಾದುಕೆಗಳನ್ನಿತ್ತು ರಾಮನಿಗೆ
ಸಂದುದು ಎನ್ನ ಸೇವೆ ಇಂದಿಗೆ ಮುಗಿಯಿತೆಂದ

ಶ್ರೀರಾಮಚಂದ್ರ ಅಭಿಷಿಕ್ತದೊರೆಯಾದ
ರಾಮ ರಾಜ್ಯವು ಉದಿಸಿತೆಂದು
ಸಕಲ ಸಂಪತ್ತು ಲಭಿಸಿದವು
ಪುರವಾಸಿಗಳೆಲ್ಲ ಸುಖಿಸುತ್ತಿರಲು

ಬಂದನಲ್ಲಿಗೆ ರಜಕ ಪತ್ನಿಯ ಮೂದಲಿಸುತ
ನಾನಲ್ಲ ರಾಮಚಂದ್ರ ನಿನ್ನ ಸ್ವೀಕರಿಸಲು
ನೀನಿದ್ದೆ ನಿನ್ನ ತವರಲ್ಲಿ ನನ್ನ ಮರೆತು
ಗತಿಸಿದೆ ಎರಡು ವರ್ಷಗಳು ನಿನ್ನ ನಂಬಲಾರೆ

ಕುಹಕವಾಡುತ ರಜಕ ಬೀದಿಯಲ್ಲಿ
ನಾಗರಿಕರ ಗಮನ ಸೆಳೆದ
ಕುಟಕಿತದು ಶ್ರೀರಾಮಚಂದ್ರನು
ಸೀತೆ ಜಾರೆಯಲ್ಲವೆಂದರಿತಿಹನು ರಾಮ

ಪುರಜನರ ಪರಿಗೆ ಬೆದರಿದನೊಂದು ಕ್ಷಣ
ಅರಸ ದಶರಥನ ಪುತ್ರ ಶ್ರೀರಾಮಚಂದ್ರನನು
ತಿಳಿದಿದೆ ಅವನಿಗೆ ಜಾನಕಿ ಭೂಮಿಜೆಯೆಂದು
ಭೂಮಿಕಾ ಅವಳು ಭೂಮಿ ತೂಕದ ಹೆಣ್ಣು

ಕರೆಸಿ ಲಕ್ಷ್ಮಣನ ಬಿಟ್ಟು ಬಾರೆಂದ ವನಕೆ
ಮರೆಯಲವಳು ಕೆಲಕಾಲ ಈ ರಾಜ್ಯ ವೈಭವವ
ಇರಲಷ್ಟು ದಿನ ವನಸಾಮ್ರಾಜ್ಞಿಯಾಗಿ
ಸರಸದಲಿ ನುಡಿದನಿಂತು ಪುರ ಪ್ರಮುಖರ ಮುಂದೆ

ಇಂದ್ರಾದಿದೇವರು ನಾರಾಯಣನೊಡಗೂಡಿ
ನೋಡುತಿರಲು ಬಿರಿಯತು ಭೂಮಿ
ಎದ್ದು ಬಂದಳು ಭೂದೇವಿ ಮೇಲೆ
ಮುದ್ದುಮಗಳ ಅಪ್ಪಿಕೊಳ್ಳುತಲವಳು

ಐಕ್ಯವಾದಳು ಭೂಮಿಜೆ ತಾಯಿ ಒಡಲಲ್ಲಿ
ಭೂಮಿತೂಕದ ಹೆಣ್ಣು ಭೂಮಿಕಾ ಇವಳು
ಭುವನದ ಭಾಗ್ಯನಿಧಿ ಭವತಾರಿಣಿ ದೇವಿ
ಮರೆಯಾದಳು ಸೀತೆ ಭವಬಂಧ ತೊರೆದು

ಜಯತು ಜಯ ಜಾನಕಿಗೆ
ಜಯ ಮಂಗಳವು ಭೂಮಿಜೆಗೆ
ಜಯತು ಜಯ ಸಿರಿದೇವಿ ಭೂಮಿಕಾ ದೇವಿಗೆ
ಸನ್ಮಂಗಳವಾಗಲಿ ಇದ ಓದಿದವರಿಗೆ ||

* * *

# ಪ್ರೇಮಾಭಟ್ ಅವರ ಪರಿಚಯ ಮತ್ತು ಸಾಧನೆ

| | | |
|---|---|---|
| ಜನನ | : | 22.9.1941 |
| ಊರು | : | ಹೆರ್ಗ (ಮಾರ್ಗ ಮಣಿಪಾಲ), ಉಡುಪಿ ತಾಲ್ಲೂಕು, ಉಡುಪಿ ಜಿಲ್ಲೆ |
| ವಿಳಾಸ | : | 'ಶ್ರೀಗುರುಪ್ರಸಾದ', ನಂ. 845, 4ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು - 560 040 |
| ಶಿಕ್ಷಣ | : | ಎಂ.ಎ. (ಕನ್ನಡ) |
| ಉದ್ಯೋಗ | : | ನಿವೃತ್ತ ಶಾಖಾಧಿಕಾರಿ, ಕರ್ನಾಟಕ ಸರಕಾರ ಸಚಿವಾಲಯ, ವಿಧಾನಸೌಧ (33 ವರ್ಷಗಳ ಸೇವೆಯ ಅನಂತರ ಸ್ವಇಚ್ಛೆಯಿಂದ ನಾಲ್ಕುವರೆ ವರ್ಷ ಮುಂಚಿತವಾಗಿ ನಿವೃತ್ತಿ) |
| ಅಧ್ಯಕ್ಷರು | : | ಶಿವರಾಮ ಕಾರಂತ ವೇದಿಕೆ, ಆರ್.ಟಿ.ನಗರ, ಬೆಂಗಳೂರು |
| ಅಧ್ಯಕ್ಷತೆ | : | ನವೆಂಬರ್ 1995ರಲ್ಲಿ ಉಡುಪಿಯಲ್ಲಿ ನಡೆದ ಎಂಟನೆಯ ದ.ಕ. ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. |
| ಗೌ.ಸಂಪಾದಕರು | : | 'ಹಣತೆ' ತ್ರೈಮಾಸಿಕ. |
| ತಂದೆ-ತಾಯಿ | : | ದಿ। ಶ್ರೀ ಜನಾರ್ದನ ಭಟ್ ಮತ್ತು ದಿ। ಶ್ರೀಮತಿ ವನಜಾಕ್ಷಮ್ಮ |
| ಪತಿ | : | ಎ.ಎಸ್. ಭಟ್ ಪ್ರಕಾಶಕರು, ಶ್ರೀ ಪ್ರೇಮಸಾಯಿ ಪ್ರಕಾಶನ ವಿಜಯನಗರ, ಬೆಂಗಳೂರು - 560 040 |
| ಮಕ್ಕಳು | : | ಮೇಜರ್ ಡಾ॥ ಗುರುಪ್ರಸಾದ್, ಚಿ॥ ಎ.ಎಸ್. ಸತ್ಯಪೂರ್ಣ |
| ಮೊದಲ ಲೇಖನ | : | ತಾಯಿನಾಡು 1960 |
| ಮೊದಲ ಕತೆ | : | ಜನಪ್ರಗತಿ 1960 |
| ಬರವಣಿಗೆಯ ಪ್ರಕಾರಗಳು | : | ಕಾದಂಬರಿ, ಸಣ್ಣಕತೆ, ವಿಡಂಬನೆ, ನಗೆಬರಹ ಕವನ, ಲೇಖನ ಮತ್ತು ವ್ಯಕ್ತಿಚಿತ್ರಣ, ಪ್ರವಾಸ ಸಾಹಿತ್ಯ ಇತ್ಯಾದಿ. |
| ಪ್ರಕಟವಾದ ಪತ್ರಿಕೆಗಳು | : | ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆ, ದ್ವೈಮಾಸಿಕ, ತ್ರೈಮಾಸಿಕ, ವಿಶೇಷಾಂಕ ಇತ್ಯಾದಿ |
| ದೂರದರ್ಶನದಲ್ಲಿ | : | ಜಿನದತ್ತ, ಶಂಕರಬೇಡಿದ್ದು, ಫಲಿತಾಂಶ, ಬದುಕಿನಲ್ಲೊಂದು ತಿರುವು, ಸುಪ್ರಭಾತ, ಹೊಸಬ, ಮುಸ್ಸಂಜೆಯ ಮರ, ಆಗಂತುಕರು, ಬಾಂಧವ್ಯ, |

## ಪ್ರೇಮಾಭಟ್‌ರವರ ಕಾದಂಬರಿಗಳು

| | | |
|---|---|---|
| 1 | ಅವಳ ಬಾಳು | 1967 |
| 2 | ಕುಂಕುಮಶೋಭಿನಿ | 1968 |
| 3 | ಮಲ್ಲಿಗೆ ಮುಡಿಗೇರಿತು | 1969 |
| 4 | ಇದ್ದು ಹೋದ ಜೀವ | 1971 |
| 5 | ಸುಜಾತ 'ಬೆಕ್ಕಿನಕಣ್ಣು' ಹೆಸರಿನಲ್ಲಿ ಚಲನಚಿತ್ರವಾಗಿದೆ. | |
| 6 | ಹೂ ಬಿಸಿಲು | 1972 |
| 7 | ಬಿದಿಗೆ ಚಂದ್ರ | 1974 |
| 8 | ಸಾಧಕ | 1976 |
| 9 | ನಂದಿನಿ | 1976 |
| 10 | ಭಾವ ಬಂಧನ | 1976 |
| 11 | ಅಕ್ಷರಲಕ್ಷ್ಮಿ | 1977 |
| 12 | ಮನೆ-ಮನ | 1977 |
| 13 | ತಾರಾಬಲ | 1976 |
| 14 | ಅಲೆಗಳು | 1978 |
| 15 | ಪರಿಣಾಮ | 1980 |
| 16 | ಮುತ್ತಿನಕೋಟೆ | 1981 |

17 ಮಿಣುಕುಹುಳು 1981
16 ಗೊಂದಲ 1982
19 ಗತಿ 1982
20 ಯಜ್ಞ 1982
21 ಅಂತಃಪುರ 1964
22 ಎರಡು ಜೊತೆ ಕಣ್ಣುಗಳು 1984
23 ಭ್ರಮಣ 1985
24 ಬಿಂದು 1986
25 ಮುಹೂರ್ತ 1987
26 ಒಂದು ವಠಾರದ ಕತೆ 1989
27 ಕೊನೆ 1990
26 ಹಸಿರು ಹೊನಲು 1990
29 ಕಾಡು ಕಡಿದು
ಊರು ಮಾಡಿದರು 1992
30 ಕೂಸನು ಕಂಡಿರಾ 1992
31 ಹಳೇಬೇರು ಹೊಸ ಚಿಗುರು 1994
32 ಹುಡುಗ ಅರಿಸಿದ ಹುಡುಗಿ 1994
33 ಒಲಿದು ಬಂದವನು 1994
'ಆಡಿ ಬಾ ಅರಗಿಣಿಯೆ'
ಹೆಸರಿನಲ್ಲಿ ಚಲನಚಿತ್ರವಾಗಿದೆ.
34 ನಿಷ್ಕ್ರಮಣ 1996
35 ಗೊಡ್ಡ 1996
36 ಎರಡು ದಡಗಳು 1997
37 ಮಜಲುಗಳು 1999
36 ಗಾದಿ (ಅಚ್ಚಿನಲ್ಲಿ) 2001
39 ದೇವರಾಣೆ (ಅಚ್ಚಿನಲ್ಲಿ) 2001

## ನಗೆ ಬರಹಗಳು

1 ದಿಬ್ಬಣ 1978
2 ದಾಸಯ್ಯನ ಬಸ್ಸು 1988

## ಕಥಾಸಂಕಲನ

1 ಮನಮೆಚ್ಚಿದವಳು 1965
2 ಲಿಪ್‌ಸ್ಟಿಕ್ ಹುಡುಗಿ 1971
3 ತಲೆ ತಿರುಕರು 1980
4 ಹೊಸ ಕಡತ 1982
5 ಸಿಡಿಮದ್ದು 1992
6 ಹಗರಣ 1994
7 ಗುಮಾನಿ 1997
8 ಮಡಿಮುತ್ತೈದೆ (ಬೃಹತ್
ಸಂಕಲನದಲ್ಲಿ ಸೇರಿಲ್ಲ) 2001

ಮೇಲಿನ ಸಂಕಲನದ ಕತೆಗಳು ಬೃಹತ್ ಸಂಕಲನದಲ್ಲಿ ಸೇರಿವೆ.

## ಬೃಹತ್ ಕಥಾಸಂಕಲನ

ಅಕ್ಷತೆ 106 ಸಣ್ಣಕತೆಗಳು 1973
ಪಂಚಾಮೃತ 108 ಸಣ್ಣಕತೆಗಳು 1966
ಪ್ರೇಮಾಭಟ್ 108 ಸಣ್ಣಕತೆಗಳು 1998
ಗೃಹಿಣಿ (ವಿಚಾರ-ಚಿಂತನೆ) 1995
ವ್ಯಕ್ತಿ ಚಿತ್ರಣ
ಶ್ರೀ ಕಯ್ಯಾರ ಕಿಞ್ಞಣ್ಣರೈ (ವ್ಯಕ್ತಿಚಿತ್ರಣ) 1997

## ಕವನ ಸಂಕಲನ

| | |
|---|---|
| ಮನೆ | 1976 |
| ಮದುಮಗಳು | 1990 |
| ಹೆರ್ಗದ ದುರ್ಗಾಮಾತೆ (ಭಕ್ತಿಗೀತೆ) | 1989 |
| ಗಂಗಾಳದೊಳಗೊಂದುಗೂಡು | 1996 |
| ಸೂತ್ರಧಾರಿಯ ಲೋಕತತ್ವ | 2000 |

ಪೂರ್ವಾಂಚಲದಲ್ಲಿ ಕೆಲವು ದಿನಗಳು... (ಪ್ರವಾಸ ಸಾಹಿತ್ಯ) 2001

## ಪ್ರಶಸ್ತಿ

1. 'ಮಿಣುಕು ಹುಳು' ಕಾದಂಬರಿಗೆ ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ, ಮಾತೃಶ್ರೀ ರತ್ನಮ್ಮ ಹೆಗ್ಗಡೆ ಪುರಸ್ಕಾರ 1981ರಲ್ಲಿ
2. 'ಗೊಂದಲ' ಕಾದಂಬರಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ಅಂತರಾಷ್ಟ್ರೀಯ ಮಹಿಳಾ ವರ್ಷದ ಪ್ರಶಸ್ತಿ 1983ರಲ್ಲಿ
3. 'ಕಾಡು ಕಡಿದು ಊರು ಮಾಡಿದವರು' ಕಾದಂಬರಿಗೆ ಭಾರತರತ್ನ ಸರ್ ಎಂ. ವಿಶ್ವೇಶ್ವರಯ್ಯ ಪ್ರತಿಷ್ಠಾನ ಟ್ರಸ್ಟ್ ಅವರಿಂದ ಪ್ರಶಸ್ತಿ 1993
4. 1978ರಲ್ಲಿ ಆಡಳಿತ ಭಾಷೆಯಲ್ಲಿ ಕನ್ನಡ ಬಳಕೆ, ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆಯಿಂದ
6. 1998ರಲ್ಲಿ 'ಗಾದಿ' ಕಾದಂಬರಿಗೆ 'ರಾಮಕ್ಕ ಪದ್ಮಕ್ಕ' ಪ್ರಶಸ್ತಿ.
7. 1999ರಲ್ಲಿ 'ಬಾಲನಲೀಲಾ ವಿನೋದ' ತುಷಾರದ ಕತೆಗೆ HMT ಕಥಾಪ್ರಶಸ್ತಿ.
8 2000ರಲ್ಲಿ 'ಪ್ರೇಮಾಭಟ್ 108 ಸಣ್ಣ ಕತೆಗಳು' ಲೇಖಕಿಯರ ಸಂಘದಿಂದ 'ಅನುಪಮಾ ಪ್ರಶಸ್ತಿ'

## ಸನ್ಮಾನ

| | |
|---|---|
| 1978ರಲ್ಲಿ | ಕನ್ನಡಿಗರ ಕೂಟ ಬಸವನಗುಡಿ ಅವರಿಂದ |
| 1981ರಲ್ಲಿ | ಅಖಿಲ ಕರ್ನಾಟಕ ಲೇಖಕಿಯರ ಸಮ್ಮೇಳನ-ದಾವಣಗೆರೆ ಅವರಿಂದ |
| 1985ರಲ್ಲಿ | ಬೆಂಗಳೂರು ದಕ್ಷಿಣ ಕನ್ನಡಿಗರ ಬೆಳ್ಳಿಹಬ್ಬ ಸಂದರ್ಭದಲ್ಲಿ |
| 1989ರಲ್ಲಿ | ಬೆಂಗಳೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಲೇಖಕಿಯರ ಸಾಹಿತ್ಯ ಸಮ್ಮೇಳನದಲ್ಲಿ |
| 1991ರಲ್ಲಿ | ಹುಟ್ಟೂರಿನ ಹೆರ್ಗ ಗ್ರಾಮದವರಿಂದ |
| 1991ರಲ್ಲಿ | ರಾಜ್ಯೋತ್ಸವದಂದು ಕನ್ನಡ ಚಳವಳಿ ಕೇಂದ್ರ, ಬೆಂಗಳೂರು |

1991ರಲ್ಲಿ ಸಚಿವಾಲಯ ನೌಕರರ ಸಂಘದಿಂದ ರಾಜ್ಯೋತ್ಸವದಂದು

1994ರಲ್ಲಿ ಅತ್ತಿಮಬ್ಬೆ ಪ್ರತಿಷ್ಠಾನ ಅವರಿಂದ, ಅತ್ತಿಮಬ್ಬೆ ಪ್ರಶಸ್ತಿ ರಾಜ್ಯೋತ್ಸವ ಸಂದರ್ಭದಲ್ಲಿ ಹಲವಾರು ಸಂಘ ಸಂಸ್ಥೆಗಳಿಂದ ಸನ್ಮಾನ.

1999ರಲ್ಲಿ ದಕ್ಷಿಣ ಕನ್ನಡ ಕನ್ನಡಿಗರ ವೇದಿಕೆ, ಬೆಂಗಳೂರು ಅವರಿಂದ 'ಭಾರ್ಗವ ಪ್ರಶಸ್ತಿ'

ಚಲನಚಿತ್ರ : ಸುಜಾತ ಕಾದಂಬರಿಯ 'ಬೆಕ್ಕಿನ ಕಣ್ಣು' ಎಂಬ ಹೆಸರಿನಲ್ಲಿ ತೆರೆಕಂಡಿದೆ. ಒಲಿದು ಬಂದವನು 'ಆಡಿ ಬಾ ಅರಗಿಣಿಯೆ' ಎಂಬ ಹೆಸರಿನಲ್ಲಿ ಚಲನಚಿತ್ರವಾಗಿದೆ.

ಕ್ಯಾಸೆಟ್ : 'ಹೆರ್ಗದ ದುರ್ಗಾ ಮಾತೆ' 1989ರಲ್ಲಿ ಬಿಡುಗಡೆಯಾಗಿದೆ.

ಕಾದಂಬರಿ : 1992ರಲ್ಲಿ ಪ್ರೊ|| ನಂಜುಂಡಶಾಸ್ತ್ರಿ ಅವರಿಂದ 'ನಂದಿನಿ' ಕಾದಂಬರಿ ಇಂಗ್ಲೀಷಿಗೆ ಅನುವಾದವಾಗಿದೆ.

ಸಂಪಾದಕತ್ವ : 'ಸಿಂಧೂರ' ಬೆಂಗಳೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಲೇಖಕಿಯರ ಸಾಹಿತ್ಯ ಸಮ್ಮೇಳನದ ಸಂಚಿಕೆ 1989ರಲ್ಲಿ

ಇತರ ಭಾಷೆಗೆ : ಕೆಲವು ಕತೆಗಳು ಇಂಗ್ಲೀಷ್ ಮತ್ತು ಮರಾಠಿ ಮತ್ತು ತೆಲುಗಿನಲ್ಲಿ ಪ್ರಕಟವಾಗಿವೆ.

ಸದಸ್ಯತ್ವ : ಪಿ.ಇ.ಎನ್. ಸದಸ್ಯತ್ವ, ಮುಂಬಯಿ

ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

1995 ಚಲನಚಿತ್ರ ಆಯ್ಕೆ ಸಮಿತಿಯ ಸದಸ್ಯತ್ವ ಸರಕಾರದಿಂದ ನೇಮಕ

1997ರ 'ದಾನಚಿಂತಾಮಣಿ', 'ಅತ್ತಿಮಬ್ಬೆ' ಆಯ್ಕೆ ಸಮಿತಿಯ ಸದಸ್ಯತ್ವ ಸರಕಾರದಿಂದ ನೇಮಕ.

ಮೂರು ವರ್ಷ ಕನ್ನಡ ಸಾಹಿತ್ಯ ಪರಿಷತ್ತಿನ ಬೆಂಗಳೂರು ಜಿಲ್ಲಾ ಮತ್ತು ಕೇಂದ್ರದ ಕಾರ್ಯಕಾರಿ ಸಮಿತಿಯ ಸದಸ್ಯತ್ವ.

'ಪುರಸ್ಕಾರ' ಕತೆಯು ಮಹಾರಾಷ್ಟ್ರ ಸರಕಾರದಲ್ಲಿ 'ಕನ್ನಡ ಭಾರತಿ'ಯಲ್ಲಿ ಪಠ್ಯವಾಗಿ ಆಯ್ಕೆ ಆಗಿದೆ.

1. 1990ರಲ್ಲಿ ಅಖಿಲ ಭಾರತ ಅರವತ್ತೇಳನೆಯ ಸಾಹಿತ್ಯ ಸಮ್ಮೇಳನದಲ್ಲಿ ಕವನ ಮಂಡನೆ.
2. 1994ರಲ್ಲಿ ಲಕ್ಕುಂಡಿ ಮಹಿಳಾ ಸಾಹಿತ್ಯ ಸಮ್ಮೇಳನದಲ್ಲಿ ಪ್ರಬಂಧ ಮಂಡನೆ.
3. 1996ರಲ್ಲಿ ಬಳ್ಳಾರಿ ಜಿಲ್ಲಾ ಸಾಹಿತ್ಯ ಸಮ್ಮೇಳನದಲ್ಲಿ ಮಹಿಳಾ ಗೋಷ್ಠಿಯ ಉದ್ಘಾಟನೆ.
4. 1997ದಲ್ಲಿ ದೊಡ್ಡಬಳ್ಳಾಪುರದಲ್ಲಿ ತಾಲ್ಲೂಕು ಕವಿ ಸಮ್ಮೇಳನದಲ್ಲಿ ಅಧ್ಯಕ್ಷತೆ.
5. 2000ದಲ್ಲಿ ಹಾವೇರಿಯ ಪ್ರಥಮ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮಹಿಳಾ ಗೋಷ್ಠಿಯ ಅಧ್ಯಕ್ಷತೆ.
8. 2000ದಲ್ಲಿ ಚಿಕ್ಕಮಗಳೂರು ತಾಲ್ಲೂಕು ಸಮ್ಮೇಳನದಲ್ಲಿ ನಡೆದ ಮಹಿಳಾ ಸಾಹಿತ್ಯ ಗೋಷ್ಠಿಯ ಅಧ್ಯಕ್ಷತೆ. ಇತ್ಯಾದಿ.. ಇತ್ಯಾದಿ

